ಕೀರ್ತನರೂಪೀ

# ಭಗವದ್ಗೀತೆ

ಶ್ರೀ ಭದ್ರಗಿರಿ ಕೇಶವದಾಸರು

ಬೆಲೆ....೫೦ ಪೈಸೆ

ಕೀರ್ತನರೂಪೀ

# ಭಗವದ್ಗೀತೆ

## ಒಂದನೆಯ ಮತ್ತು ಎರಡನೆಯ ಅಧ್ಯಾಯ

(ಶ್ಲೋಕ, ಅರ್ಥ ಮತ್ತು ಕೀರ್ತನೆಗಳೊಂದಿಗೆ)

ಶ್ರೀ ಭದ್ರಗಿರಿ ಕೇಶವದಾಸರು

ದಾಸಾಶ್ರಮ ರೀಸರ್ಚ್ ಪಬ್ಲಿಕೇಶನ್ಸ್,
" ದಾಸಾಶ್ರಮ " ಪುರಂದರಪುರ, ಐನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು—೧೦.

# ಮುನ್ನುಡಿ

ಭಗವಂತನಿಂದ ಉಪದಿಷ್ಟವಾದ ಉಪನಿಷತ್ತು ಗೀತೆ. ಗೀತೆ ಎಂದೊಡನೆಯೇ ಭಗವದ್ಗೀತೆ ಎಂಬುದನ್ನು ಅರಿಯದವರಿಲ್ಲಾ. ಧರ್ಮ ಸಂಕಟಕ್ಕೆ ಸಿಲುಕಿದ ಪಾರ್ಥನಿಗೆ 'ನಿಮಿತ್ತ ಮಾತ್ರಂ ಭವಸವ್ಯಸಾಚಿನ್' ಎಂಬುದನ್ನು ಸಾರಲೋಸುಗ ಹೊರಹೊಮ್ಮಿತು ಭಗವಂತನ ಹೃದಯವಾದ ಈ ಗೀತೆ. ಶ್ಲೋಕ, ತಾತ್ಪರ್ಯಗಳೊಂದಿಗೆ ಗೀತೆಯ ಪ್ರತಿ ಶ್ಲೋಕವನ್ನು ಕೀರ್ತನ ರೂಪವಾಗಿ ಹಾಡಿದಲ್ಲಿ ಶ್ರೋತೃ ವೃಂದಕ್ಕೆ ಹೆಚ್ಚಿನ ಪ್ರಯೋಜನ ವಾಗಬಹುದೆಂಬ ದೃಷ್ಟಿಯಿಂದ ಈ ಪ್ರಯತ್ನಗೈದುದಾಗಿದೆ. ಮುಂದಿನ ಅಧ್ಯಾಯಗಳ ಶ್ಲೋಕಗಳನ್ನು ಕ್ರಮೇಣ ಕೀರ್ತನ ರೂಪಿಯಾಗಿ ಪ್ರಕಟಿ ಸುವ ಸಂಕಲ್ಪವಿದೆ. ಬೊಂಬಾಯಿಯ 'ಆನಂದ ಭವನ' ಹೋಟೇಲು ಮ್ಹಾಲೀಕರಾದ ಶ್ರೀ ಎ. ರಾಮನಾಯಕ್‌ರವರು ಬೊಂಬ್ಯಾ ರಾಮಾಯಣ ಕೀರ್ತನ ಕಮಿಟಿಯ ಕಾರ್ಯದರ್ಶಿಗಳಾಗಿ ನಿಂತು ಕೀರ್ತನ ಭಕ್ತಿ ಪ್ರಚಾರಕ್ಕೆ ಮಹತ್ತರ ಕಾಣಿಕೆ ಸಲ್ಲಿಸಿದವರು. ಸರಳ ಹೃದಯರೂ, ಉದಾರಿಗಳೂ ಆದ ಶ್ರೀ ಎ. ರಾಮನಾಯಕರವರು ಈ ಪವಿತ್ರ ಗ್ರಂಥ ಪ್ರಕಟಣೆಗೆ ಸಹಾಯಿಸ ದಿರುತ್ತಿದ್ದರೆ ಈ ಗ್ರಂಥ ಇಷ್ಟು ಶೀಘ್ರವಾಗಿ ಭಕ್ತಾದಿಗಳ ಕೈ ಸೇರುತ್ತಿರಲಿಲ್ಲ. ಶ್ರೀರಾಮ ನಾಯಕರಿಗೂ, ಅವರ ಕುಟುಂಬ ವರ್ಗಕ್ಕೂ ಭಕ್ತ ವತ್ಸಲನಾದ ಶ್ರೀ ಕೃಷ್ಣನು ಸರ್ವ ಮಂಗಳವನ್ನೂ ದಯಪಾಲಿಸಲೆಂದು ಬೇಡುತ್ತೇನೆ. ಎಲ್ಲರೂ ಈ ಗ್ರಂಥವನ್ನು ನಿತ್ಯಪಾರಾಯಣಗೈದು ಭಗವದನುಗ್ರಹಕ್ಕೆ ಪಾತ್ರ ರಾಗಬೇಕಾಗಿ ವಿನಂತಿ.

ಇಂತೀ ಶ್ರೀ ಕೃಷ್ಣಪದಾನುರಾಗಿ,

**ಭದ್ರಗಿರಿ ಕೇಶವದಾಸ್.**

॥ ಓಂ ಶ್ರೀ ಕೇಶವಾಯನಮಃ ॥

ರಾಗ: ಭೀಮಪಲಾಸ್ — ತ್ರಿತಾಳ:

ಮಾತೇ ಭಗವದ್ಗೀತೆ। ಪೂತೆ ಲೋಕ ವಿಖ್ಯಾತೆ। ಖ್ಯಾತೆ ಮುನಿಜನ ಪ್ರೀತೆ। ಹರಿಜಾತೆ ಕಲ್ಯಾಣ ದಾತೆ॥ಪ॥ ಪಾರ್ಥ ಹೃದಯ ವಿಷಾದ ನಿವಾರಣಿ। ಪಾರ್ಥ ಸಾರಥಿ ಹೃದಯ ಸ್ಫುರಣಿ॥ ಆರ್ತ ದುಃಖ ಭವಭಯ ವಿಮೋಚಣೀ। ಪಾರ್ಥ ಜನ್ಮ ಕೃತಾರ್ಥ ಕಾರಿಣಿ॥೧॥ ಉಭಯ ಸ[illegible] ಸನ್ಮಧ್ಯ ಪ್ರಬೋಧಿನಿ। ಕುಭಯ ವಿಷಾದ ವ್ಯಾಮೋಹ ವಿಚ್ಛೇದಿನಿ। ಸುಭರಿತ ಜ್ಞಾನತತ್ವ ಪ್ರಕಾಶಿನಿ। ಅಭಯ ಪ್ರದಾಯಿನಿ ಜನನೀ-ಜನನೀ॥೨॥ ಜ್ಞಾನ ಕರ್ಮ ಭಕ್ತಿಯೋಗ ಪ್ರದಾಯಿನಿ। ಧ್ಯಾನ ರಾಜ ಯೋಗ ಪ್ರಬೋಧಿನಿ ಪೂರ್ಣಬ್ರಹ್ಮ ತತ್ವಾರ್ಥ ವಿಕಾಸಿನಿ। ಮೌನಿವೃಂದ ಹೃನ್ಮಂದಿರ ವಾಸಿನಿ॥೩॥ ಕೇಶವ ಭಾಸುರ ವದನ ಅವತರಣಿ॥ ಕ್ಲೇಶದೋಷ ಸಮುದ್ರ ವಿತರಣಿ। ಆಶಾಕೋಪ ವಿಪಾಶ ವಿನಾಶಿನಿ। ದಾಸ ಕೇಶವನುತ ಹೃದಯ ವಿಹಾರಿಣಿ॥೪॥

ರಾಗ: ಭೀಮಪಲಾಸ್ — ತ್ರಿತಾಳ:

ಜಯ ಭಗವದ್ಗೀತೆ। ಮಾತೇ॥ಪ॥ ಜಯ ಜಯ ಗೀತೆ। ಜಯ ವ್ಯಾಸಜಾತೆ। ಜಯ ಜಯ ಇಹ ಪರ ಕಲ್ಯಾಣ ದಾತೆ॥೧॥ ತತ್ತ್ವೋದ್ಯಾನೆ। ಶಾಂತಿ ನಿಧಾನೆ। ಭವ ಭಯ ಹಾರಿಣಿ ಸರ್ವಗುಣ ಗಣೇ॥೨॥ ಮುಕ್ತಿ ದಾಯಿನಿ। ಶಕ್ತಿ ಕಾರಿಣಿ। ಭಕ್ತಿ ಪ್ರಚೋದಿನಿ ಜನನೀ ಜನನೀ ೩॥ ಜೀವಾರ್ಜುನ ಮೋಹ ಕಲ್ಮಶ ಹಾರಿಣಿ। ದೇವಕೀ ತನಯ ಶ್ರೀ ಕೃಷ್ಣ ಚಿಂತಾಮಣಿ॥೪॥ ಆಶಾ ಮೋಹ ಸ್ವಾರ್ಥ ಸಂಹಾರಿಣಿ॥ ದಾಸ ಕೇಶವನುತ ಹೃದಯ ವಿಹಾರಿಣಿ ॥ ೫ ॥



ಶ್ರೀ ಎ. ರಾಮನಾಯಕರು
ಈ ಪುಸ್ತಕದ ಸೇವಾಕರ್ತರು



ಶ್ರೀ ಭದ್ರಗಿರಿ ಕೇಶವದಾಸರು

॥ ಓಂ ಶ್ರೀ ಕೇಶವಾಯ ನಮಃ ॥

# ಕೀರ್ತನರೂಪಿ

# ಭಗವದ್ಗೀತಾ

## ಒಂದನೇಯ ಅಧ್ಯಾಯ

ಧೃತರಾಷ್ಟ್ರ ಉವಾಚ

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥**

ರಾಗ—ಧಾಣಿ ತ್ರಿತಾಳ

ಸಂಜಯಾ ಏನಾಯ್ತು ಏನಾಯ್ತು । ಧರ್ಮಕ್ಷೇತ್ರವಾದ ಕುರು ಕ್ಷೇತ್ರ ದೊಳ್ ॥ ಪ ॥ ನಮ್ಮವರೊಂದೆಸೆ ಪಾಂಡವರೊಂದೆಸೆ । ಭಿನ್ನಾಭಿಪ್ರಾಯದಿ ಕುರುಕ್ಷೇತ್ರದೊಳ್ ॥ ಉನ್ನತ ಕದನವ ಮಾಡಲೋಸುಗವಾಗಿ । ಬನ್ನಪಟ್ಟು ಒಂದೆಡೆ ಸೇರಿದರಲ ॥ ೧ ॥ ಛಲವ ಬಿಡದು ಕುರುಕುಲ ಉತ್ಪನ್ನರು । ಬಲವಾಧಿಕ್ಯದಿ ಕದನ ಕೊಡುವರು ॥ ಒಲಿದು ಪಾಂಡವರಿಗೆ ದಾಸಕೇಶವ ನುತ । ಸಲಹಲು ಎಮ್ಮವರ್ ಯುದ್ಧವ ಗೈದರೆ ॥ ೨ ॥

ಸಂಜಯ ಉವಾಚ

**ದೃಷ್ಟ್ವಾತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್॥ ೨ ॥**

ಆಗ ಎದುರಿಗೆ ಒಡ್ಡಿದ ಪಾಂಡವರ ಸೈನ್ಯವನ್ನು ಕಂಡು ದುರ್ಯೋಧನನು ದ್ರೋಣಾಚಾರ್ಯರ ಬಳಿಗೆ ಹೋಗಿ ಇಂತೆಂದನು.

ರಾಗ—ಬಹಾರ್ ತ್ರಿತಾಳ

ಕಂಡು ದುರ್ಯೋಧನ ಪಾಂಡವ ಸೇನೆಯ । ಚಂಡಭುಜಬಲರ ಪ್ರಚಂಡ ವಿಕ್ರಮ ॥ ಪ ॥ ಏಳಕ್ಷೋಹಿಣಿ ಸೇನೆಯ ಕಂಡನು । ಮೇಳವಿಸಿದ ಬಲು ಸುಭಟರ ಕಂಡನು ॥ ಥಾಳಿ ನಡೆಯುವಾ ಮುನ್ನ ದ್ರೋಣರ ಬಳಿ । ಹೇಳ ಬಗೆದ ನೃಪ ಮಾತನೊಂದನು ॥ ೧ ॥ ಕೇಶವ ಪಾಂಡವ ಪೋಷಕನಾಗಿರೆ । ಏಕಾದಶ ಅಕ್ಷೋಹಿಣಿ ಇದ್ದೇಂ ॥ ನಾಶ ಅಧರ್ಮಕೆ ಜಯ ಧರ್ಮ ಪಥಕೆ । ದಾಸರ ಸಲಹುವ ದಾಸ ಕೇಶವನುತ ॥ ೨ ॥

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್।**
**ವ್ಯೂಢಾಂ ದ್ರುಪದ ಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

**ಅತ್ರಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**
**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**
**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ । ೬ ॥**

ಗುರುಗಳೆ, ಪಾಂಡವರ ದೊಡ್ಡಸೇನೆಯನ್ನು ವ್ಯವಸ್ಥಿತ ಕ್ರಮದಲ್ಲಿ ನಿಲ್ಲಿಸಿರುವ ಬುದ್ಧಿವಂತನಾದ ನಿಮ್ಮ ಶಿಷ್ಯ ದ್ರುಪದಪುತ್ರನನ್ನು ನೋಡಿರಿ. ॥೩॥

ಇಲ್ಲಿ ಶೂರರೂ, ಕದನದಲ್ಲಿ ಭೀಮಾರ್ಜುನರಿಗೆ ಸರಿಸಮಾನರೂ, ಮಹಾ ಬಿಲ್ಲಾಳುಗಳೂ ಆದ ಯುಯುಧಾನ (ಸಾತ್ಯಕಿ), ವಿರಾಟ, ಮಹಾ ರಥಿಯಾದ ದ್ರುಪದ ಇವರನ್ನು ನೋಡಿರಿ. ॥ ೪ ॥

ಧೃಷ್ಟಕೇತು, (ಶಿಶುಪಾಲನ ಮಗ) ಚೇಕಿತಾನ (ಯಾದವಭಟ) ಬಲಿಷ್ಠನಾದ ಕಾಶೀರಾಜ, ಪುರುಜಿತ್ತು. ಕುಂತೀಭೋಜ(ಕುಂತೀಯ ಸಂಬಂಧಿಗಳು), ಶೈಬ್ಯ (ಧರ್ಮರಾಜನಿಗೆ ದೇವಿಕಾ ಎಂಬ ಹೆಣ್ಣು ಕೊಟ್ಟ ಮಾವ), ಸುಭದ್ರೆಯ ಮಗ (ಅಭಿಮನ್ಯು), ದ್ರೌಪದಿಯ ಮಕ್ಕಳು (ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕರ್ಮ, ಶತಾನೀಕ, ಶ್ರುತಸೇನ), ಈ ಮಹಾರಥರನು ನೋಡಿರಿ.

ರಾಗ—ಹಿಂದೋಳ ತ್ರಿತಾಳ

ಕಂಡಿರಾ ಪಾಂಡವ ಸೇನೆಯ ಗುರುಗಳೇ । ಕಂಡಿರಾ ಪಾಂಡವಸೇನೆ ॥ಪ॥ ಜಾಣನಾತ ತವ ಶಿಷ್ಯ ದ್ರುಪದಸುತ ಬಿಲ್ಲುಬಾಣಗಳ ಧರಿಸಿ ನಿಂದಿಹ । ಕಾಣೆ ಅವಗೆ ಎಣೆಪೃಥ್ವಿಯೊಳೆಲ್ಲಿಡೆ । ಗೋಣೌಕುವ ನಮ್ಮ ಸೇನೆಯನೆಲ್ಲ ॥ ೧ ॥ ಶೂರರ ಕಂಡಿರಾ ಯುಯುಧಾನು ವಿರಾಟ । ಧೀರರ ಕಂಡಿರಾ ಅವರ ಸೇನೆಯೊಳ್ । ವೀರ ಮಹಾರಥ ದ್ರುಪದನ ಕಂಡಿರಾ । ಶೂರ ಧೃಷ್ಟಕೇತುವನು ಕಂಡಿರಾ ॥ ೨ ॥ ಪ್ರಬಲ ಪರಾಕ್ರಮಿ ಚೇಕಿತಾನನು । ಬಲು ಬಲಶಾಲಿಯು ಕಾಶಿರಾಜನು । ಛಲದಂಕನು ಪುರುಜಿತ್ತುವೀ ಧರೆಯೊಳು । ಮಲೆವ ಶಕ್ತ್ರಘೊರೆ ಕುಂತೀಭೋಜನು ॥ ೩ ॥ ಮನುಕುಲತಿಲಕನು ಶೈಬ್ಯ ಪರಾಕ್ರಮಿ । ಘನ ಶಕ್ತನು ಧೊರೆ ಯುಧಾಮನ್ಯುವು । ಅನುವಾಗಿಹ ಉತ್ತಮೌಜಸ್ಸು । ಇನ ಪ್ರಭೆಯಿಂ ನಿಂದಿಹ ಸೌಭದ್ರ ॥ ೪ ॥ ಪ್ರತಿವಿಂಧ್ಯನು ಶ್ರುತಸೋಮ ಶ್ರುತಕರ್ಮ । ಶತಾನೀಕ ಶ್ರುತಸೇನರೆಂಬುವಾ । ಖತಿಯಿಂದೆಸೆವ ಕೃಷ್ಣೆಯ ಸುತರನು ನೀವ್ । ಕ್ಷಿತಿಯೊಳೆಸೆವ ಬಲು ವೀರರ ಕಂಡಿರ ॥ ೫ ॥ ಈಸು ಪರಾಕ್ರಮಿಗಳಿಂದೊಡಗೊಂಡು । ಘಾಸಿಗೈಯುವರು ಪಾಂಡವರೆಮ್ಮ । ಕೇಶವದಾಸನುತನು ಸತತವವರ । ಪೋಷಿಸುತಿಹದೆಂಬುದನರಿಯರಿ ನೀವ್ ॥ ೬ ॥

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿತೇ ॥ ೭ ॥**

ಬ್ರಾಹ್ಮಣೋತ್ತಮರೇ, ಇನ್ನು ನಮ್ಮ ಕಡೆಯಲ್ಲಿ, ಮುಖ್ಯವಾಗಿ ನಮ್ಮ ಸೇನೆಯಲ್ಲಿ ನಾಯಕರಾಗಿ ಯಾರಿರುವರೋ ಅವರನ್ನು ನನ್ನಿಂದ ತಿಳಿದುಕೊಳ್ಳಿರಿ. ಅವರನ್ನು ನಿಮ್ಮ ನೆನಪಿಗಾಗಿ ತಿಳಿಸುತ್ತೇನೆ.

**ಭವಾನ್ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥**

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**

ನೀವೂ, ಭೀಷ್ಮರು, ಕರ್ಣನು, ಯುದ್ಧದಲ್ಲಿ ಜಯಶಾಲಿಯಾದ ಕೃಪನು, ಅಶ್ವತ್ಥಾಮನು, ವಿಕರ್ಣನು, ಸೋಮದತ್ತನ ಮಗನು, ಜಯದ್ರಥನು, ನನಗೋಸ್ಕರ ಪ್ರಾಣದಾಸೆಯನ್ನು ತೊರೆದು ಬಗೆಬಗೆಯ ಶಸ್ತ್ರಗಳನ್ನೂ, ಆಯುಧಗಳನ್ನೂ ಹಿಡಿದಿರುವ ಇನ್ನೂ ಎಷ್ಟೋ ಮಂದಿ ಶೂರರಿರುವರು. ಅವರೆಲ್ಲರೂ ಕಾಳಗದಲ್ಲಿ ನುರಿತವರು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥ ೧೦ ॥**
**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧ ॥**

ಭೀಷ್ಮರಿಂದ ರಕ್ಷಿತವಾಗಿರುವ ಈ ನಮ್ಮ ಸೇನೆಯ ಬಲ ಕಡಿಮೆ ಯಲ್ಲ. ಭೀಮನಿಂದ ರಕ್ಷಿತವಾದ ಇವರ ಬಲವೇನೋ ಅಮಿತವಾಗಿರುವುದು. ಆದರೂ ನೀವೆಲ್ಲರೂ ನಿಮ್ಮ ಸ್ಥಳಗಳಲ್ಲಿದ್ದುಕೊಂಡು ಎಲ್ಲೆಡೆಯಿಂದಲೂ ಭೀಷ್ಮರನ್ನೇ ಕಾಪಾಡಿಕೊಳ್ಳಿ.

ರಾಗ—ಹಿಂ. ಕಾಫಿ. ತ್ರಿತಾಳ

ಗುರುವರಾ ನಮ್ಮ ಕಡೆಯ ನಾಯಕರ | ಗುರುತಿಸು | ನಮ್ಮ ಕಡೆಯ ನಾಯಕರಾ | ನಿಮ್ಮನೆನಹಿಗಾಗಿ ಪೇಳುವೆ ಹೆಸರ ॥ ಪ ॥ ಕದನದಿ ಮದ ನಾರಿಯಗೆಲ್ಲುವ ನೀವ್ | ಕದನ ಚೌಪಟಮಲ್ಲರು ಭೀಷ್ಮ | ಹದನವರಿತು

ಕಾದುವ ಭಟ ಕರ್ಣನು | ಸಮರವಲ್ಲಿದ ಶೌರ್ಯಾನ್ವಿತ ಕೃಪನು || ೧ ||
ರುದ್ರಾಂಶನು ವೀರ ಅಶ್ವತ್ಥಾಮನು | ಭದ್ರನಾಗಿರುವ ಸೇನೆಯ ವಿಕರ್ಣನು ||
ಕ್ಷುದ್ರಪಾಂಡವ ಸೇನೆಯ ಪುಡಿ ಗೈಯುವ, ಯುದ್ಧ ವಿಶಾರದ ಭೂರಿ–
ಶ್ರವನು || ೨ || ಜಯಪ್ರಧನ ಬಲ ವರ್ಣಿಸಲಸದಳ | ಜಯವೆನಗಾಗಲು
ಬಲು ಭಟರಿಹರು | ಭಯವಿಲ್ಲವು ನೀವಿರಲು ಎಮ್ಮಯದಳ | ಜಯ ದೊರಕಿಸಿ
ಕೊಡುವುದು ನಿಶ್ಚಯವು || ೩ || ಪೋಷಿಸುತಿಹ ಎಮ್ಮಯ ಬಲ ಭೀಷ್ಮನು|
ಪೋಷಿಸಿ ನೀವೆಲ್ಲ ಕುರುವೃದ್ಧನನು | ಪೋಷಿಪ ಪಾಂಡವ ಸೇನೆಯ
ಭೀಮನು | ಪೋಷಿಪ ತನ್ನವರ ದಾಸಕೇಶವಸುತ || ೪ ||

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ |**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂದಧ್ಮೌ ಪ್ರತಾಪವಾನ್ || ೧೨||**

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ |**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ || ೧೩ ||**

ಆಗ ಕೌರವನಿಗೆ ಹರ್ಷವನ್ನುಂಟುಮಾಡಬೇಕೆಂದು ಕುರುಕುಲಕ್ಕೆ ಹಿರಿಯನೂ, ಪ್ರತಾಪಿಯೂ ಆದ ಪಿತಾಮಹನು ಘಟ್ಟಿಯಾಗಿ ಸಿಂಹನಾದವನ್ನು ಗೈದು ತನ್ನ ಶಂಖವನ್ನೂದಿದನು. ಬಳಿಕ ಒಮ್ಮೆಗೆ ಅನೇಕ ಶಂಖಗಳೂ, ಭೇರಿಗಳೂ, ತಮ್ಮಟೆಗಳೂ, ನಗಾರಿಗಳೂ ಘೋರ್ಗರೆಯಲು ಆ ನಿನಾದವು ಮಹತ್ತರವಾಯಿತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ |**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ||೧೪||**

ಬಳಿಕ ಶ್ವೇತವರ್ಣದ ಕುದುರೆಗಳನ್ನು ಹೂಡಿದ ದೊಡ್ಡ ರಥದಲ್ಲಿ ಕುಳಿತಿದ್ದ ಶ್ರೀಕೃಷ್ಣನೂ, ಅರ್ಜುನನೂ ತಮ್ಮ ದಿವ್ಯ ಶಂಖಗಳನ್ನೂದಿದರು.

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ**
**॥ ೧೫ ॥**

ಶ್ರೀಕೃಷ್ಣನು ಪಾಂಚಜನ್ಯವನ್ನೂ, ಅರ್ಜುನನು ದೇವದತ್ತವನ್ನೂ ಅದ್ಭುತ ಯುದ್ಧಕ್ಕೈವ ಶಕ್ತಿಯುಳ್ಳ ಭೀಮಸೇನನು ಪೌಂಡ್ರವೆಂಬ ಮಹಾ ಶಂಖವನ್ನೂ ಊದಿದರು.

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷ ಮಣಿಪುಷ್ಪಕೌ ॥ ೧೬ ॥**

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥**

**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ದಧ್ಮುಃ ಪೃಥಕ್ಪೃಥಕ್ ॥ ೧೮ ॥**

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥**

ಕುಂತೀ ಪುತ್ರನಾದ ಧರ್ಮಜನು ಅನಂತವಿಜಯವೆಂಬ ಶಂಖವನ್ನೂದಿದನು. ನಕುಲ ಸಹದೇವರು ಕ್ರಮವಾಗಿ ಸುಘೋಷ, ಮಣಿಪುಷ್ಪಕ ಎಂಬ ಶಂಖಗಳನ್ನು ಊದಿದರು. ಪರಾಕ್ರಮಿಯಾದ ಕಾಶಿರಾಜನೂ, ಮಹಾರಥಿಯಾದ ಶಿಖಂಡಿಯೂ, ಧೃಷ್ಟದ್ಯುಮ್ನ, ವಿರಾಟ, ಅಜೇಯನಾದ ಸಾತ್ಯಕಿ, ದ್ರುಪದ, ದ್ರೌಪದಿಯ ಮಕ್ಕಳೂ, ಮಹಾಬಾಹು ವಾದ ಅಭಿಮನ್ಯು ಇವರೆಲ್ಲರೂ ಬೇರೆಬೇರೆಯಾಗಿ ಶಂಖ ಧ್ವನಿಯನ್ನು ಗೈದರು. ಧೃತರಾಷ್ಟ್ರನೇ, ಭೂಮ್ಯಾಕಾಶಗಳಲ್ಲಿ ವ್ಯಾಪಿಸಿದ ಈ ಗದ್ದಲವು ಕೌರವರ ಎದೆಯನ್ನು ಬಿರಿಯುವಂತೆ ಮಾಡಿತು.

ಅಥ ವ್ಯವಸ್ಥಿತಾನ್‌ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ।

ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।
ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ
॥ ೨೧ ॥

ಮಹೀಪತಿ, ಬಳಿಕ ಕಪಿಕೇತನನಾದ ಪಾರ್ಥನು ಯುದ್ಧಕ್ಕೆ ಸಿದ್ಧರಾಗಿರುವ ಕೌರವರನ್ನು ಕಂಡು ಯುದ್ಧಕಾಲ ಸನ್ನಿಹಿತವಾಯಿತೆಂದು ಗಾಂಢೀವವನ್ನೆತ್ತಿಕೊಂಡು "ಅಚ್ಯುತಾ, ಎರಡು ಸೇನೆಗಳ ನಡುವೆ ನನ್ನ ರಥವನ್ನು ನಿಲ್ಲಿಸು" ಎಂದನು.

**ರಾಗ—ಹಮೀರ್** **ತ್ರಿತಾಳ**

ಸಿಂಹನಾದ ಗೈದಾ । ಭೀಷ್ಮನು । ಸಿಂಹನಾದಗೈದಾ ॥ ಪ ॥
ಕುರುಕುಲ ತಿಲಕಗೆ ಸಂತಸವಾಗಲು ॥ ಅ. ಪ ॥

ಶಂಖವೆತ್ತಿ ಮಹಾನಾದವ ಗೈಯಲು । ಶಂಖಭೇರಿ ತಮ್ಮಟೆನಗಾರಿಗಳ್ ॥ ಬಿಂಕದಿ ಭೋರ್ಗರೆದವ್ ಕುರುಸೇನೆಯೊಳ್ । ಪಂಕಜ ಲೋಚನ ಕಂಡಿದನಾಗ ॥ ೧ ॥ ಹೂಡಿದ ಅದ್ಭುತ ಪಾರ್ಥವ ತೇರನು । ನೋಡಿದರುಭಯರು ಕೌರವ ಸೇನೆಯ ॥ ಮಾಡಿದರದ್ಭುತ ಶಂಖ ನಾದವನು ಕೂಡಿ ತಮ್ಮ ಸೇನೆಯ ಸುಭಟರನು ॥ ೨ ॥ ಪಾಂಡವ ಪ್ರಾಣನು ಪಾಂಚಜನ್ಯವನು । ಗಾಂಢೀವಿಯು ಸಲೆ ದೇವದತ್ತವನು ॥ ಪೌಂಡ್ರವ ಭೀಮಕರ್ಮ ವೃಕೋದರ । ಬ್ರಹ್ಮಾಂಡ ಬಿಚ್ಚುವಂತೆ ಊದಿದರ್ ॥ ೩ ॥

ಅನಂತ ವಿಜಯವ ಧರ್ಮಸಂಭವನು । ಅನುವಾಗಲು ಕದನಕ್ಕೆ ಊದಲು ॥ ಅನುಸರಿಸಿದವರವನನು ಯಮಳರು । ತಮ್ಮನುವ ತೋರಿಸಲು ಶಂಖವನೂದಿದ ॥ ೪ ॥

ಕಾಶಿರಾಜ, ಶಿಖಂಡಿ, ವಿರಾಟರು । ಸಾತ್ಯಕಿ ಧೃಷ್ಟದ್ಯುಮ್ನ ದ್ರುಪದರು ॥ ಪ್ರತಿವಿಂಧ್ಯಾದಿ ಪಾಂಚಾಲೆಯ ಕುವರರು । ಅತಿಧ್ವನಿಗೈಯುವ ಶಂಖವನೂದಲ್ ॥ ೫ ॥

ಕಪಿಕೇತನ ಪಾರ್ಥನು ಅರಿಸೇನೆಯ । ಕುಪಿತದಿ ಕಾಣುತ ಬಿಲ್ಲ ಧರಿಸುತ ॥ ಅಪಾರ ಮಹಿಮ ಶ್ರೀ ದಾಸಕೇಶವನುತ । ಸ್ಥಾಪಿಸು ರಥವನ್ ಇತ್ತಂಡದೊಳೆಂದ ॥ ೬ ॥

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್‌ರಣ ಸಮುದ್ಯಮೇ॥ ೨೨ ॥**

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥**

ಅಚ್ಯುತನೇ, ಕಾದಾಡಬೇಕೆಂಬ ಇಚ್ಛೆಯಿಂದ ನಿಂತಿರುವ ಇವರನ್ನು ನಾನು ನೋಡಬೇಕು. ಈ ರಣರಂಗದಲ್ಲಿ ನಾನು ಯಾರೊಡನೆ ಕದನಗೈಯಬೇಕೆಂಬುವನ್ನು ನೋಡಿ ತಿಳಿಯಬೇಕಾಗಿದೆ. ವಿವೇಕ ಶೂನ್ಯನಾದ ಕುರುಭೂಪನಿಗೆ ಸಂತೋಷವನ್ನುಂಟುಮಾಡಲಿಕ್ಕಾಗಿ ಕದನಕ್ಕಾಗಿ ಜೊತೆ ಸೇರಿರುವವರನ್ನು ನಾನೊಮ್ಮೆ ನೋಡುವೆನು.

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್**
**॥ ೨೪ ॥**

**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್‌ಸಮವೇತಾನ್‌ಕುರೂನಿತಿ ॥ ೨೫ ॥**

ಎಲೈ ಧೃತರಾಷ್ಟ್ರನೇ, ಆಲಸ್ಯವನ್ನು ಗೆದ್ದ ಪಾರ್ಥನು ಹೀಗೆನ್ನಲು, ಹೃಷೀಕೇಶನು ರಥವನ್ನು ಉಭಯ ಸೇನೆಗಳ ಮಧ್ಯೆ, ಭೀಷ್ಮ, ದ್ರೋಣರ ಮತ್ತೆಲ್ಲಾ ರಾಜರ ಇದಿರ್ಗಡೆ ನಿಲ್ಲಿಸಿ " ಪಾರ್ಥಾ, ಇಲ್ಲಿ ನೆರೆದಿರುವ ಕೌರವ ರನ್ನು ನೋಡು " ಎಂದನು.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೃನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ಭ್ರಾತೃನ್ ಪುತ್ರಾನ್ ಪೌತ್ರಾನ್ಸಖೀಂಸ್ತಥಾ ॥ ೨೬ ॥**

**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**
**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ।೨೭।**
**ಕೃಪಯಾ ಪರಯಾಽಽವಿಷ್ಟೋ ವಿಷೀದನ್ನಿದಮಬ್ರವೀತ್**

ಪಾರ್ಥನು ಉಭಯ ಸೇನೆಗಳಲ್ಲೂ ಇದ್ದ ಇತರ ಸಂಬಂಧಿಗಳನ್ನೂ, ತಾತಂದಿರನ್ನೂ, ಆಚಾರ್ಯರನ್ನೂ. ಸೋದರ ಮಾವಂದಿರನ್ನೂ, ಅಣ್ಣ ತಮ್ಮಂದಿರನ್ನೂ, ಮಕ್ಕಳು, ಮೊಮ್ಮಕ್ಕಳನ್ನೂ, ಸಖರನ್ನೂ, ಮಾವಂದಿರನ್ನೂ. ಹಿಂದೆ ಉಪಕಾರ ಗೈದವರನ್ನೂ ಕಂಡನು. ಈ ನೆಂಟರೆಲ್ಲ ರನ್ನೂ ನೋಡಿ ಅತ್ಯಂತ ಕನಿಕರಗೊಂಡು ವಿಷಾದದಿಂದ ಇಂತೆಂದನು.

ರಾಗ—ಹಿಂ.ಕಾಪಿ ತ್ರಿತಾಳ

ರಥವ ನಿಲ್ಲಿಸು ಹರಿ ಸೇನೆಯ ಮಧ್ಯದೊಳ್ । ಅತಿರಥಾದಿ ಸುಭ ಟರ ಕಾಂಬೆನು ಒಮ್ಮೆ ॥ ಪ ॥ ಯುದ್ಧಕ್ಕೆ ನಿಂದಿಹ ಸೇನೆಯ ಕಾಂಬೆನು। ರಣೋದ್ಯೋಗಕೆಳಸಿಹರ ನೋಡುವೆ ॥ ಬುದ್ಧಿರಹಿತ ಕುರುಭೂಪನ ತೋಷಕೆ । ಯುದ್ಧಕ್ಕೆ ಸಿದ್ಧರಾಗಿಹರ ಕಾಣುವೆ ॥ ೧ ॥ ಪಾರ್ಥನ ಪ್ರಾರ್ಥನೆ ಯಂತೆ ಹೃಷಿಕೇಶ । ವರೂಥವ ಸೇನೆಯ ಮಧ್ಯದೊಳ್ ನಿಲ್ಲಿಸಿ ॥ ಪಾರ್ಥನೆ ನೆರೆದಿಹ ಕೌರವರ ನೋಡೆಂದು । ಆರ್ತರಕ್ಷಕ ಹರಿ ಪೇಳಲಾಕ್ಷಣವೇ ॥ ೨ । ನೋಡಿದ ಪಾರ್ಥನು ಉಭಯಸೇನೆಯೊಳಿದ್ದ। ಗಾಢ ದೇಹ ಸಂಬಂಧಿಗಳನ್ನೆಲ್ಲ॥

ನೋಡಿದ ಆಚಾರ್ಯರ ತಾತಂದಿರ। ಕೂಡಿದ ಕನಿಕರದಿಂದ ಪಾರ್ಥನು ॥ ೩ ॥ ತನ್ನವರನ್ನು ಕಂಡುನ್ನತ ದುಃಖದಿ । ಅಣ್ಣ ತಮ್ಮಂದಿರ ಕೊಲ್ಲಲು ಹೇಸಿ ॥ ಇನ್ನೇನ್ ಗೈಯಲ್ ಕಾಣದೆ ಕೇಶವದಾಸನುತನೊಳ್ ವಿಷಾದದಿ ಪೇಳಿದನ್ ॥ ೪ ॥

ಅರ್ಜುನ ಉವಾಚ

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್॥೨೮॥**

**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ॥ ೨೯ ॥**

ಶ್ರೀಕೃಷ್ಣಾ, ಕದನಗೈಯಬೇಕೆಂದು ಇದುವರೆವಿಗೆ ನಿಂತಿರುವ ಈ ಸ್ವಜನರನ್ನು ನೋಡಿ ನನ್ನ ಕೈಕಾಲುಗಳು ಕುಸಿಯುತ್ತವೆ. ಬಾಯಿ ಒಣಗುತ್ತಿದೆ. ಮೈಯಲ್ಲಿ ನಡುಕ ಉಂಟಾಗುತ್ತಿದೆ. ರೋಮಾಂಚವಾಗುತ್ತಿದೆ.

**ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ ೩೦ ॥**

ಗಾಂಡೀವ ಧನಸ್ಸು ಕೈಯಿಂದ ಜಾರಿಬೀಳುತ್ತಿದೆ. ಮೈಚರ್ಮವೆಲ್ಲ ಸುಡುತ್ತಿದೆ. ನನಗೆ ನಿಲ್ಲುವಷ್ಟು ಶಕ್ತಿಸಾಲದು. ಮನಸ್ಸಿಗೆ ಭ್ರಮಣೆಯಾದಂತಿದೆ.

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧ ॥**

ಕೇಶವಾ, ನನಗೆ ಕಾಣಬಾರದ ಅಪಶಕುನಗಳೆಲ್ಲ ಕಾಣುತ್ತಿವೆ ಯುದ್ಧದಲ್ಲಿ ಸ್ವಜನರನ್ನು ಸಂಹರಿಸುವುದರಿಂದ ಲೇಸಾದೀತೆಂದು ನನಗೆ ತೋರುವದಿಲ್ಲ.

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥೩೨॥**

ಶ್ರೀಕೃಷ್ಣಾ, ನನಗೆ ಜಯವೂ ಬೇಡ, ರಾಜ್ಯವೂ ಬೇಡ, ಯಾವ ಸುಖವೂ ಬೇಡ. ಗೋವಿಂದ, ರಾಜ್ಯದಿಂದ ಆಗಬೇಕಾದುದೇನಿದೆ ? ಕೊನೆಗೆ ಭೋಗಗಳಿಂದಾಗಲೀ, ಬದುಕಿರುವುದರಿಂದಾಗಲಿ, ಏನಾಗಬೇಕು ?

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥೩೩॥**

ಯಾರಿಗಾಗಿ ಈ ಭೋಗಗಳೆಲ್ಲ, ನಮಗೆ ಬೇಕೋ ಅವರೇ ತಮ್ಮ ಜೀವದಾಶೆಯನ್ನು ತೊರೆದು, ಧನದಾಶೆಯನ್ನೂ ತೊರೆದು ಯುದ್ಧಕ್ಕೆ ನಿಂತಿರುವರು.

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥ ೩೪॥**

ಆಚಾರ್ಯರು, ಪಿತೃಸಂಬಂಧಿಗಳು, ಮಕ್ಕಳು, ತಾತಂದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು ಭಾವಮೈದುನರು ಇವರೆಲ್ಲರೂ ಯುದ್ಧಕ್ಕೆ ನಿಂತಿರುವರು.

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫ ॥**

ಮಧುಸೂದನ, ಇವರಿಂದ ನಾನು ಹೊಡೆಯಿಸಿಕೊಂಡರೂ ಸರಿ. ಇವರನ್ನು ಕೊಲ್ಲುವ ಮೂಲಕ ಮೂರ್ಲೋಕದ ಒಡೆತನ ದೊರೆಯುವ ದಿದ್ದರೂ ನನಗೆ ಬೇಡ. ಹೀಗಿರುವಲ್ಲಿ ಬರಿಯ ಭೂಮಿಗಾಗಿ ನಾವಿವರನು ಕೊಲ್ಲುವ ಯುದ್ಧ ಮಾಡುವುದಿಲ್ಲವೆಂದು ಹೇಳಬೇಕೆ ?

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬॥**

ಜನಾರ್ದನ, ಈ ಧೃತರಾಷ್ಟ್ರನ ಮಕ್ಕಳನ್ನು ಕೊಂದರೆ ನಮಗೇನು ಸಂತೋಷವಾದೀತು ? ಈ ಆತತಾಯಿಗಳನ್ನು ಕೊಲ್ಲುವುದರಿಂದ ಒಂದೇ ನಾನು ಪಾಪವನ್ನು ಗಂಟುಹಾಕಿಕೊಳ್ಳಬೇಕಾದೀತು.

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥**

ಆದ್ದರಿಂದ ನಮ್ಮವರಾದ ಕೌರವರನ್ನು ನಾವು ಕೊಲ್ಲುವುದು ಸರಿಯಲ್ಲ. ಎಲೈ ಮಾಧವ, ಸ್ವಜನರನ್ನು ಕೊಂದು ನಾವು ಸುಖದಿಂದಿರುವುದು ಹೇಗೆ ಸಾಧ್ಯ ?

ರಾಗ–ಬೇಹಾಗ್ ತ್ರಿತಾಳ

ಕದನ ಗೈಯಲಾರೆ । ಪ್ರಭುವೆ । ಯುದ್ಧ ಮಾಡಲಾರೆ ।
ಹದನ ವಿದನರಿತು ಕ್ಷಮಿಸು ಎನ್ನ ನೀ ॥ ಪ ॥

ಸಮರಕೆ ನಿಂದಿಹ ಸ್ವಜನರ ಕಾಣುತ । ಧಮನಿ ಅವಯವಗಳ್ ಕುಸಿಯುತಲಿಹುವು ॥ ಬಾಯಿ ಒಣಗುತಿದೆ, ಮೈ ಕೈ ನಡುಗುತಿದೆ ಕೈಯಿಂದು ಡುಗುತಿದೆ ಗಾಂಡೀವಧನುವು ॥ ೧ ॥ ಚರ್ಮ ಸುಡುತಲಿದೆ । ನಿಲ್ಲಲಾರೆ ಹರಿ । ಚಿತ್ತಭ್ರಮಣೆಯುಂಟಾಗಿದೆ ಘೋರೆಯೆ ॥ ರೋಮನಿಗುರುತಿದೆ ತಲೆಯು ತಿರುಗುತಿದೆ । ಕಾಣಬಾರದಪಶಕುನ ಕಾಣುತಿದೆ ॥ ೨ ॥ ಸ್ವಜನರ ಕೊಲ್ವುಧರಿಂದ ಹಿತವಿಲ್ಲ । ಗೆಲವು ರಾಜ್ಯ ಸುಖ ಬೇಡ ಬೇಡೆನಗೆ । ಭೋಗದಿಂದೇನು ಬದುಕಿನಿಂದೇನು ಘೋರ ಸಂಗರವಿದು ಹಾನಿಕಾರಕವು ॥೩॥ ಗುರುಹಿರಿಯರು ಆಚಾರ್ಯತಾತಂದಿರು । ಮರೆತು ಜೀವ ಧನದಾಶೆಗಳನ್ನು । ತರಿಯಲೊಬ್ಬರನ್ನೊಬ್ಬರ ನಿಂದಿಹರ್ । ಹರಿಯೆ ಸಮರವಿದು ದುಃಖ ದಾಯಕವು ॥ ೪ ॥ ಯಾರಿಗಾಗಿ ಈ ಕದನಗೈಯುವೆವೋ। ಅವರೇ ನಿಂದಿಹರು ಸಮರಾಂಗಣದೊಳ್ ॥ ಮೂರು ಲೋಕದ ಧೊರೆತನವನೂ ಒಲ್ಲೆ । ಇವ ರೆನ್ನನು ತರಿಯಲಿ ಕೊಲ್ಲಲಿ ಹರಿ ॥ ೫ ॥ ಆಶಿಸಿ ಭೂಮಿಗೆ ಕೊಂದರೆ

ಇವರನು । ಕೇಶವ ಪಾಪವು ಗಂಟುಬೀಳುವುದು ॥ ನಾಶಗೈದಿವರ ಸುಖಿಪುದೇ ಸುಂಟು । ದಾಸಕೇಶವಸುತ ಆದುದಾಗಲಿ ನಾ ॥ ೬ ॥

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥ ೩೮ ॥**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ॥**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

ದುರಾಶೆಯಿಂದ ಬುದ್ಧಿಗೆಟ್ಟಿರುವ ಇವರೇನೋ ಕುಲಕ್ಷಯದಿಂದಾಗುವ ಕೇಡನ್ನೂ, ಮಿತ್ರರಿಗೆ ಎರಡೆಣಿಸುವದರಿಂದಾಗುವ ಪಾಪವನ್ನೂ ಅರಿಯದೆ ಇರುವರು. ಆದರೆ ಎಲೈ ಜನಾರ್ದನನೆ, ಕುಲಕ್ಷಯದಿಂದಾಗುವ ಕೇಡನ್ನು ಚೆನ್ನಾಗಿ ಬಲ್ಲ ನಾವು ಈ ಪಾಪವನ್ನು ಮಾಡದೆ ಹಿಮ್ಮೆಟ್ಟಬೇಕೆಂಬುದನ್ನು ತಿಳಿಯದೆ ಇರುವುದು ಹೇಗೆ ?

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**
**ಅಧರ್ಮಾಭಿಭವಾತ್‌ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥ ೪೧ ॥**
**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥**
**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**
**ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇಽನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥**

ಕುಲವು ಕ್ಷಯವಾಗಹತ್ತಿದರೆ ಬಹುಕಾಲದಿಂದ ನಡೆದುಕೊಂಡು ಬಂದಿರುವ ಕುಲಧರ್ಮಗಳು ನಾಶವಾಗುವವು. ಧರ್ಮವು ನಷ್ಟವಾದರೆ ಕುಲದವರನ್ನೆಲ್ಲ ಅಧರ್ಮವು ಬೆನ್ನಂಟಿಕೊಳ್ಳುವದು. ಎಲೈ ಕೃಷ್ಣನೇ,

ಅಧರ್ಮವು ಮುಸುಕಿಕೊಂಡಿರುವುದರಿಂದ ಕುಲದಲ್ಲಿರುವ ಹೆಂಗಸರು ಕೆಡುವರು. ವೃಷ್ಣಿವಂಶೋದ್ಭವ (ಕೃಷ್ಣ) ನೆ, ಹೆಂಗಸರು ಕೆಟ್ಟರೆ ವರ್ಣಗಳು ಬೆರಕೆಯಾಗಿ ಹೋಗುವುವು. ವರ್ಣಗಳು ಬೆರೆತುಹೋಗುವುದೆಂಬುದು ಕುಲವನ್ನು ಹಾಳುಮಾಡಿದವರಿಗೂ, ಕುಲದವರಿಗೂ ನರಕಕ್ಕೆ ಕಾರಣ ವಾಗುವುದು. ಏಕೆಂದರೆ ಇವರ ಪಿತೃಗಳು ತಮಗೆ ಪಿಂಡಪ್ರದಾನವೂ, ಜಲತರ್ಪಣವೂ ಇಲ್ಲದಂತಾಗಿ ತಮ್ಮ ಲೋಕದಿಂದ ಅಧೋಗತಿಗೆ ಬೀಳುವರು. ಕುಲವನ್ನು ನಾಶಪಡಿಸುವವರು ವರ್ಣಸಂಕರವಾಗುವಂತೆ ಮಾಡಿದ ಈ ತಪ್ಪುಗಳಿಂದ ಶಾಶ್ವತವಾದ ಜಾತಿಧರ್ಮಗಳೂ, ಕುಲಧರ್ಮಗಳೂ ನಾಶವಾಗುವುವು. ಎಲೈ ಜನಾರ್ದನನೇ, ಯಾರ ಕುಲಧರ್ಮಗಳು ನಾಶವಾಗಿರುವುವೋ ಅಂಥ ಮನುಷ್ಯರಿಗೆ ನರಕವಾಸವು ತಪ್ಪದೇ ಆದುವದೆಂದು ದೊಡ್ಡವರಿಂದ ಕೇಳಿದ್ದೇನೆ.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯ ಸುಖಲೋಭೇನ ಹಂತುಂ ಸ್ವಜನ ಮುದ್ಯತಾಃ ॥ ೪೫ ॥**

**ಯದಿ ಮಾಮಪ್ರತೀಕಾರ ಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥**

ಅಯ್ಯೋ ನಾವು ರಾಜ್ಯ ಸುಖದ ಅತ್ಯಾಶೆಯಿಂದ ಸ್ವಜನರನ್ನು ಕೊಲ್ಲುವುದಕ್ಕೆ ಹೊರಟಿರುವೆವಲ್ಲ ; ಇದು ಮಹಾ ಪಾಪವನ್ನು ಮಾಡುವುದಕ್ಕೆ ನಿಶ್ಚಯಿಸಿದಂತಾಗಿರುತ್ತದೆ. ಯಾವ ಪ್ರತೀಕಾರವನ್ನು ಮಾಡದೆ, ಆಯುಧವನ್ನೇ ಹಿಡಿಯದೆ ನಿಂತಿರುವ ನನ್ನನ್ನು ಈ ಧೃತರಾಷ್ಟ್ರನ ಮಕ್ಕಳು ಕೈಯಲ್ಲಿ ಶಸ್ತ್ರವನ್ನು ಹಿಡಿದೆತ್ತಿ ಕೊಂದುಹಾಕಿದರೆ ಅದೇ ನನಗೆ ಹೆಚ್ಚು ಕ್ಷೇಮವಾದೀತು.

ಸಂಜಯ ಉವಾಚ

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್**
**ವಿಸೃಜ್ಯ ಸಶರಂ ಚಾಪಂ ಶೋಕ ಸಂವಿಗ್ನ ಮಾನಸಃ ॥ ೪೭ ॥**

ಇಂತು ಪಾರ್ಥನು ದುಃಖದಿಂದ ಕುದಿಯುವ ಮನದಲ್ಲಿ ಬಿಲ್ಲು ಬಾಣಗಳನ್ನು ಬಿಸುಟು ರಥದ ಮುಂಗಡೆಯಲ್ಲಿ ಕುಳಿತುಬಿಟ್ಟನು.

**ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಅರ್ಜುನ ವಿಷಾದಯೋಗೋನಾಮ ಪ್ರಥಮೋಧ್ಯಾಯಃ.**

ರಾಗ—ಚಂದ್ರಕಂಸ ತ್ರಿತಾಳ

ಅರಿಯರಿವರು ಹರಿಯೆ। ಘೊರೆಯೆ। ಅರಿಯರಿವರು ಹರಿಯೆ ॥ ದುರಾಶೆಯಿಂ ಬುದ್ಧಿ ಕೆಟ್ಟ ಕೌರವರು ॥ ಪ ॥ ಮರೆತು ಕದನಕಿವರೀಗ ನಿಂತಿಹರು। ಕುಲಕ್ಷಯವಾಗ್ವುದು ಯುದ್ಧ ಗೈದೊಡೆ ॥ ಕುಲಕ್ಷಯವಾದೊಡೆ ಎಮ್ಮ ಸನಾತನ। ಕುಲಧರ್ಮ ನಾಶವಾಗ್ವುದು ದಿಟವು ॥ ೧ ॥ ಧರ್ಮ ನಷ್ಟವಾದೊಡೆ ಕುಲದವರನು। ಅಧರ್ಮ ಅಂಟಿಕೊಂಬುದು ಬೆಂಬಿಡದೆ ॥ ಅಧರ್ಮ ಮುಸುಕಿಕೊಂಡರೆ ಸ್ತ್ರೀಯರು ಕೆಟ್ಟು। ಅಧರ್ಮ ಸತಿಯರಿಂ ವರ್ಣಸಂಕರವಾಗ್ವುದು ॥ ೨ ॥ ವರ್ಣಗಳ್ ಬೆರೆಯಲು ಕುಲ ಹಾಳಾಗ್ವುದು। ಕುಲವ ಕೆಡಿಪರಿಗೆ ನರಕವೆ ಗತಿಯು ॥ ಜಲತರ್ಪಣ ಪಿಂಡಪ್ರದಾನವಿಲ್ಲದೆ। ಪಿತೃಗಳೆಲ್ಲ ಅಧೋಗತಿಕಾಂಬರು ॥ ೩ ॥ ಜಾತಿ ಕುಲದ ಧರ್ಮಗಳೆಲ್ಲಕ್ಷಯಿಸಿ। ಖ್ಯಾತಿ ನಷ್ಟವಾಗುತೆ ಇಹಪರದಿ ॥ ಭೀತಿಗೊಳಿಪ ನರಕವು ತಪ್ಪದು ದಿಟ। ನೀತಿ ಇದನರಿತು ಯುದ್ಧವಗೈವರು ॥ ೪ ॥ ರಾಜ್ಯ ಸುಖದ ಅತ್ಯಾಶೆಯಿಂ ಸ್ವಜನರೊಳ್। ವ್ಯಾಜ್ಯಗೈದು ಯುದ್ಧಕೆ ನಿಂದಿಹೆವಲಾ ॥ ತ್ಯಾಜ್ಯ ಗೈದು ಈ ಆಶೆಗಳನು ಜ್ಞಾ। ನಾಜ್ಯ ಹೊತ್ತಿಸುತೆ ಧನ್ಯನಾಗುವೆನು ॥ ೫ ॥ ದೋಷಿಗಳೆನ್ನನು ಹರಿದಾಸ ಕೇಶವನುತ ಕೊಲ್ಲೆನವರನಾ। ಈಸು ನುಡಿದು ಧನು ಬಿಸುಟು ರಥದ ಮೇಲ್। ವಿಷಾದ ಯೋಗದಿಂ ಪಾರ್ಥ ಕುಳಿತನು ॥ ೬ ॥

**( ಅರ್ಜುನ ವಿಷಾದ ಯೋಗವು ಮುಗಿದುದು )**

## ॥ ಒಂದನೇ ಅಧ್ಯಾಯ ಸಂಪೂರ್ಣಂ ॥



॥ ಓಂ ಶ್ರೀ ಕೇಶವಾಯ ನಮಃ ॥

# ಎ ರ ಡ ನೇ ಅ ಧ್ಯಾ ಯ

ಸಂಜಯ ಉವಾಚ

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

ದುಃಖದಿಂದ ಕಣ್ಣೀರು ತುಂಬಿ, ದಾರಿಕಾಣದೆ ಪರಿತಪಿಸುತ್ತ ಅಶು ಪೂರ್ಣಲೋಚನದಿಂದ ಒಡಗೊಂಡ ಅರ್ಜುನನನ್ನು ನೋಡಿ ಮಧು ಸೂದನನಿಂತೆಂದನು.

ಶ್ರೀಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**
**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩॥**

ಹೇ ಅರ್ಜುನ, ಈ ವಿಷಮ ಪರಿಸ್ಥಿತಿಯಲ್ಲಿ 'ದೊಡ್ಡವರು ಅನು ಸರಿಸಿದ, ಸ್ವರ್ಗ ಪಥವನ್ನು ತಪ್ಪಿಸುವ' ಹೆಸರು ಕೆಡಿಸುವ ಈ ಹೊಲಸು ನಿನಗೆ ಬರಬಾರದ ಕಡೆ ಎಲ್ಲಿಂದ ಬಂತು ? ಹೇ ಪಾರ್ಥ, ಹೇಡಿಯಾಗಬೇಡ, ಶತ್ರು ಸಂತಾಪಕನೆ, ಕೀಳಾದ ಎದೆಗೇಡಿತನವನ್ನು ಬಿಟ್ಟು ಎದ್ದೇಳು.

ಅರ್ಜುನ ಉವಾಚ

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿ ಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥೪॥**

**ಗುರೂನಹತ್ವಾ ಹಿ ಮಹಾನುಭಾವಾನ್ ಶ್ರೇಯೋಭೋಕ್ತುಂ ಭೈಕ್ಷ್ಯಮಪೀಹ ಲೋಕೇ । ಹತ್ವಾರ್ಥಕಾಮಾಂಸ್ತು ಗುರೂನಿಹೈವ । ಭುಂಜೀಯ ಭೋಗಾನ್ರುಧಿರ ಪ್ರದಿಗ್ಧಾನ್ ॥ ೫ ॥**

ಮಧುಸೂದನಾ, ಹೇ ಅರಿಸೂದನಾ, ಪೂಜಾರ್ಹರಾದ ಭೀಷ್ಮ ದ್ರೋಣರನ್ನು ಯುದ್ಧದಲ್ಲಿ ಬಾಣಗಳಿಂದೆಂತು ನೋಯಿಸಲಿ ? ಗುರುಹಿರಿಯರನ್ನು ಕೊಂದು ಬದುಕಿರುವುದಕ್ಕಿಂತ ತಿರಿದು ತಿಂದು ಬಾಳುವುದು ಮೇಲಲ್ಲವೇ ? ಗುರುಗಳನ್ನು ಕೊಂದರೆ ಅವರ ರಕ್ತದಿಂದ ಲೇಪಿಸಲ್ಪಟ್ಟ ಅರ್ಥ ಕಾಮರೂಪವಾದ ಭೋಗಗಳನ್ನು ಮಾತ್ರ ಈ ಲೋಕದಲ್ಲಿ ಅನುಭವಿಸಿಯೇನು

**ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾನೋ ಜಯೇಯುಃ। ಯಾನೇವ ಹತ್ವಾ ನ ಜಿಜೀವಿಷಾಮಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬ ॥**

ಯಾವುದನ್ನು ಗೈದರೆ ನಮಗೆ ಹೆಚ್ಚಿನದೋ, ನಾವು ಅವರನ್ನು ಗೆಲ್ಲುವೆವೋ, ಅವರು ನಮ್ಮನ್ನು ಗೆಲ್ಲುವರೋ, ಯಾವುದನ್ನೂ ನಾವು ಅರಿಯೆವು. ಯಾರನ್ನು ಕೊಂದು ನಾವು ಬದುಕಲಿಚ್ಛಿಸುವುದಿಲ್ಲವೋ ಆ ಧೃತರಾಷ್ಟ್ರ ಪುತ್ರರು ನಮ್ಮೆದುರಿಗೆ ನಿಂತಿರುವರು.

**ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿತ್ವಾಂ ಧರ್ಮಸಮ್ಮೂಢಚೇತಾಃ । ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭ ॥**

ಈ ಬುದ್ಧಿಯ ದೀನತೆಯ ದೋಷವು ನನ್ನ ಸ್ವಭಾವವನ್ನು ಹೊಡೆದುರುಳಿಸಿರುವುದು. ಧರ್ಮವಾವುದೆಂಬುದನ್ನರಿಯದೆ ನಿನ್ನನ್ನು ಕೇಳುತ್ತಲಿದ್ದೇನೆ. ಯಾವುದರಿಂದ ನನಗೆ ಶ್ರೇಯಸ್ಸೋ ಅದನ್ನು ನೀನೆ ನಿಶ್ಚಯಿಸಿ ಹೇಳು. ನಾನು ನಿನ್ನ ಶಿಷ್ಯನು. ನಿನಗೆ ಶರಣು ಬಂದಿರುವ ನನಗೆ ತಿಳುವಳಿಕೆಯನ್ನು ನೀಡು.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್ ಯಚ್ಛೋಕಮುಚ್ಛೋಷಣ ಮಿಂದ್ರಿಯಾಣಾಮ್ । ಅವಾಪ್ಯ ಭೂಮಾವಸಪತ್ನಮೃದ್ಧಂ ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮ ॥**

ಶತ್ರುರಹಿತವಾದ, ಸಂಪದ್ಯುಕ್ತವಾದ, ರಾಜ್ಯವು ಈ ಲೋಕದಲ್ಲಿ ನನಗೆ ದೊರೆತರೂ, ಸುರಲೋಕದ ಒಡೆತನ ನನಗೆ ದೊರೆತರೂ, ಇಂದ್ರಿಯಗಳನ್ನು ಸೊರಗಿಸುತ್ತಿರುವ ನನ್ನ ಈ ಶೋಕವನ್ನು ಇವು ಯಾವುವೂ ಹೋಗಲಾಡಿಸುವಂತೆ ನನಗೆ ಕಾಣುವುದಿಲ್ಲ.

ಸಂಜಯ ಉವಾಚ

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾತೂಷ್ಣೀಂ ಬಭೂವ ಹ॥೯॥**

ಎಲೈ, ಧೃತರಾಷ್ಟ್ರನೇ, ಹೃಷಿಕೇಶನಿಗೆ ಗುಡಾಕೇಶನು ಹೀಗೆ ಹೇಳಿ ಯುದ್ಧ ಮಾಡುವುದಿಲ್ಲವೆಂದು ತಿಳುಹಿ ಸುಮ್ಮನಾದನು.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋ ರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥**

ಹೇ ಭರತ ವಂಶೋತ್ಪನ್ನನೇ ; ಉಭಯ ಸೇನೆಯ ಮಧ್ಯೆ ವ್ಯಥಿತನಾಗಿ ಕುಳಿತ ಪಾರ್ಥನನ್ನು ಹಾಸ್ಯ ಮಾಡುವವನಂತೆ ಹೃಷಿಕೇಶನಿಂತೆಂದನು.

ರಾಗ—ಜೀವನ್‌ಪುರಿ ತ್ರಿತಾಳ

ಮುಂಗಾಣದೆ ಕಂಗೆಟ್ಟ ಪಾರ್ಥನಿಗೆ । ಅಂಗಜಪಿತ ನಿಂತೆಂದನು ॥ ॥ ಪ ॥ ಎತ್ತಣಿಂ ಬಂದಿತು ಕಿಲ್ಬಿಷ ನಿನಗಿದು । ಉತ್ತಮರನುಸರಿಸದ ದುಷ್ಪಥವು ॥ ಅತ್ತ ಪರಲೋಕ ಕೀರ್ತಿಯ ತಪ್ಪಿಸಿ । ಇತ್ತ ಇಹದಿ ಅಕೀರ್ತಿ ತರುವ ಪಥ ॥ ೧ ॥

ಪಾರ್ಥನೆ ನೀ ಎದೆಗೇಡಿಯಾಗದಿರು । ಸಾರ್ಥಕವಲ್ಲವಿದೆಂದಿಗೂ ನಿನಗೆ ॥ ಕೀರ್ತಿ ಪಡೆಯೆ ಹಗೆಗಳ ಗಡಗಟ್ಟಿಸು। ಆರ್ತನಾಗದಿರು ಏಳು ಎಚ್ಚರೀಳು ॥ ೨ ॥ ಎಂದೆನೆ ಶ್ರೀಹರಿ ಪಾರ್ಥನಿಂತೆಂದ। ಅಂದವೆ ಭೀಷ್ಮ ದ್ರೋಣ ರೊಳು ಕದನ ॥ ಕೊಂದು ಬಾಳುವುದೆ ಗುರುಹಿರಿಯರ ಹರಿ । ಕೊಂದು ಬದುಕಿರೆವು ಧಾರ್ತರಾಷ್ಟ್ರರಾ ॥ ೩ ॥ ಗೆಲುವು ಎಮಗೋ ಸೋಲೆಮಗೊ ಅರಿಯೆನಾವ್ । ನೆಲೆಸಿದೆ ದೋಷವು ಬುದ್ಧಿ ದೈನ್ಯದಿಂ ॥ ಹೊಲಬುಗೆಟ್ಟೆ ಹನು ಧರ್ಮಪರಿಣಯದಲಿ । ಎಲೆ ಹರಿ ಶರಣುಬಂದಿರುವೆ ಪೊರೆಯೊ ॥ ೪ ॥ ಸಿರಿರಾಜ್ಯಗಳೆಲ್ಲವ ನಾ ಪಡೆದರು । ಸುರಲೋಕದ ಒಡೆತನ ಸಿಕ್ಕಿದರೂ ॥ ಸೊರಗಿಪ ಎನ್ನಯ ದುಃಖ ಮಾಣದಿದು । ಕರುಣಿಸು ಶಾಂತಿಯ ದಾಸಕೇಶವನುತ ॥ ೫ ॥

ಶ್ರೀಭಗವಾನುವಾಚ

**ಅಶೋಚ್ಯಾ ನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನ ಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

ಪಾರ್ಥ, ಯಾರಿಗಾಗಿ ಅಳಬಾರದೋ, ಅವರಿಗಾಗಿ ಶೋಕಿಸು ತ್ತಿರುವೆ. ಮಹಾ ಪ್ರಾಜ್ಞನಂತೆ ಮಾತುಗಳನ್ನು ಆಡುತ್ತಿರುವೆ. ಪಂಡಿತ ರಾದವರು ಸತ್ತವರಿಗಾಗಲೀ ಒಡುಕಿರುವವರಿಗಾಗಲೀ ದುಃಖಿಸುವುದಿಲ್ಲ.

ರಾಗ—ಜೀವನ್‌ಪುರಿ ತ್ರಿತಾಳ

ಜೀವನು ಪಾರ್ಥ ಜೀವನ ಸಂಗ್ರಾಮದಿ । ದೇವನೆ ಸಾರಥಿ ಜೀವನ ರಥಕೆ ॥ ಪ ॥ ನಾನು ನನ್ನದೆಂಬ ಅಹಂ ಮಮತೆಯಲಿ ಜ್ಞಾನ ಶೂನ್ಯನಾಗುವ ಜೀವನನು ॥ ದಾನವಾಂತಕನು ಪಥ ತೋರಿಪಿ ನಿಜ । ಜ್ಞಾನವ ಬೋಧಿಪ ಗೀತೋಕ್ತಿಯಿಂ ॥೧॥ ವೃಥಾ ಸುತನಿಗೆಂದನು ದೇವಕಿ ಸುತ । ವ್ಯಥಿಸಬಾರದಕೆ ವ್ಯಥಿಸುವೆ ಏಕೆ । ವೃಥಾ ಪ್ರಾಜ್ಞರಂತಾಡುವೆ ಏಕೆ ನೀ । ಮತಿವಂತರು ದುಃಖಿಸುವರೆ ಇವಕೆ ॥ ೨ ॥ ದೇಹ ಕೊಲ್ಲದಿದ್ದರೂ ತಾ ಸಾಯ್ವದು ಆತ್ಮ ಕೊಂದರೂ ಸಾಯದೆಂದು ॥ ದೇಹಾತ್ಮವ ವಿಂಗಡಿಸುವ ಜ್ಞಾನಿಯು । ಸಾವು

ಹುಟ್ಟಿಗಳಿಗೆಂದೂ ದುಃಖಿಸನು ॥ ೩ ॥ ತಿಳಿವಿಲ್ಲದೆ ತಿಳಿದವರಂತಾಡುವೆ । ತಿಳಿದುಕೋ ತಿಳಿವಿದ ಆತ್ಮ ಸ್ಥಿರನೆನುತ । ತಿಳಿದರೆ ದುಃಖ ಬಂಧು ಗಳೊಂದೂ ಇಲ್ಲವು । ತಿಳಿದು ನಡೆ ಎಂದ ದಾಸಕೇಶವನುತ ॥ ೪ ॥

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥**

ನಾನು ಎಂದಿಗೂ ಇರಲಿಲ್ಲವೆಂಬುದಿಲ್ಲ. ನೀನೂ ಇರಲಿಲ್ಲವೆಂಬುದಿಲ್ಲ. ಈ ಅರಸರೂ ಇರಲಿಲ್ಲವೆಂಬುದಿಲ್ಲ. ಇನ್ನುಮೇಲೆ ನಾವುಗಳು ಯಾರೂ ಇರುವುದಿಲ್ಲವೆಂಬುದೂ ಇಲ್ಲ.

ರಾಗ : ತಿಲಂಗ್ ತ್ರಿತಾಳ

ಅಳಿವು ಆತ್ಮಕಿಲ್ಲ । ಅರ್ಜುನಾ ಉಳಿವು ನಿತ್ಯವಲ್ಲಾ ದೇಹಕೆ ॥ಪ॥ ನಾನು ನೀನು ಈ ಅರಸರೆಲ್ಲರೂ ಯಾವಾಗಲೂ ಇಲ್ಲದೆ ಇರುತಲಿ । ಎನಿತು ಕಾಲವಾದರೂ ನಾವೆಲ್ಲರೂ ಇಲ್ಲದೆ ಹೋಗುವುದೂ ಇಲ್ಲವು ॥ ೧ ॥ ಹುಟ್ಟಿ ಸಾಯುವುದು ದೇಹ ಪ್ರಾರಬ್ಧದಿ । ಹುಟ್ಟದು ಸಾಯದು ಅವಿನಾಶಿ ಆತ್ಮ। ಕಟ್ಟಿಗೆ ದೇಹವು ಬೆಂಕಿಯು ಚೈತನ್ಯ। ಸುಟ್ಟರು ದೇಹವ ಸಾಯದು ಆತ್ಮ ॥ ೨ ॥ ಕರ್ಮದಂತೆ ದೊರೆವುದು ಶರೀರವೆಮ್ಮ । ಕರ್ಮದಂತೆ ಸುಖ ದುಃಖಗಳ್ ಬಹವು ॥ ಕರ್ಮವ ಜ್ಞಾನದಿಂ ಸುಟ್ಟುದುಹಲು ಮನ । ನಿರ್ಮಲ ವಾಗ್ವುದು ದೊರೆವುದು ಮುಕ್ತಿ ॥ ೩ ॥ ನಾಶರಹಿತ ಚೈತನ್ಯವದಾತ್ಮವು । ನಾಶಯುಕ್ತವೀ ಕೊಳಕು ಕೊಂಪೆಯು ॥ ಈಸಿ ದ್ವಂದ್ವ ನು ಫಲವೆನಗರ್ಪಿಸಿ। ಕಡನ ಗೈಯೆಂದ ದಾಸಕೇಶವನುತ ॥ ೪ ॥

**ದೇಹಿನೋऽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ॥**
**ತಥಾ ದೇಹಾಂತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ದೇಹಧಾರಿಯಾದವನಿಗೆ ಈ ದೇಹದಲ್ಲಿ ಹುಡುಗತನ, ಹರೆಯ ಮುಪ್ಪು ಇವು ಹೇಗೆ ಬರುವುವೋ ಹಾಗೆಯೇ ಮತ್ತೊಂದು ದೇಹವು ಬರುವುದು. ತಿಳಿದವನು ಈ ವಿಷಯದಲ್ಲಿ ಮೋಸ ಹೋಗುವುದಿಲ್ಲ.

ರಾಗ—ಸಾರಂಗ ತ್ರಿತಾಳ

ಬದಲಾಗುವುದೀ ದೇಹ । ದೇಹ । ಬದಲಾಗದು ಆತ್ಮವದು ವಿದೇಹ ॥ ಪ ॥ ದೇಹಕೆ ಬಾಲ್ಯ ಯೌವನ ವೃದ್ಧಾಪ್ಯವು । ಬಾಹುದು ಸಹಜವೆಂತೋ ಅಂತೆಯೇ ॥ ಸಾವು ನೋವುಗಳು ಇರುವುದು ಸಹಜವು । ದೇಹದ ನಿಯಮವ ಮೀರಲಸಾಧ್ಯ ॥ ೧ ॥ ದೇಹವಳಿದರೂ ಆತ್ಮವಳಿಯದಲೆ। ಬಾಹುದು ಬೇರೆ ದೇಹವದು ದಿಟವು ॥ ಸಾವು ನೋವುಗಳ ತಪ್ಪಿಪ ಮುಕ್ತಿಯು । ಸೇರಿದ ಬಳಿಕವೀ ಉರುಳಾಟ ನಿಲ್ವುದು ॥ ೨ ॥ ಶ್ರೀಶನ ಮಹಿಮೆಯ ಅರಿತವರೆಲ್ಲರು । ನಾಶವಂತವಾದ ದೇಹವ ನಂಬದೆ॥ ಆಶಿಸಿ ಮುಕ್ತಿಯ ಪಡೆವರೆಂದು ಹರಿ । ದಾಸಕೇಶವನುತ ಪಾರ್ಥಗೆ ಹೇಳಿದ॥ ೩ ॥

**ಮಾತ್ರಾ ಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽ ನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

ಆದರೆ ಎಲೆ ಕೌಂತೇಯ, ಇಂದ್ರಿಯಗಳ ಮತ್ತು ವಿಷಯಗಳ ಸೋಂಕುಗಳು ಶೀತ, ಉಷ್ಣ, ಸುಖ, ದುಃಖ ಇವುಗಳನ್ನು ಕೊಡುತ್ತಿರುವುವು. ಅವು ಬರುತ್ತಲೂ, ಹೋಗುತ್ತಲೂ ಇರುವುವು. ನಿತ್ಯವಾಗಿರುವುದಿಲ್ಲ. ಭರತವಂಶೋತ್ಪನ್ನನೆ, ಅವುಗಳನ್ನು ತಡೆದುಕೊ.

ರಾಗ—ಹಿಂ. ಕಾಫಿ ತ್ರಿತಾಳ

ಪಂಚಜ್ಞಾನೇಂದ್ರಿಯದಿಂದ । ಪ್ರಪಂಚದ ಜ್ಞಾನವರಿವಾಗ ದ್ವಂದ್ವ। ॥ ಪ ॥ ಸಹ್ಯವಸ್ತುಗಳ ಕಾಣುತನಲಿದಕ್ಷಿ। ಅಸಹ್ಯಗಳ ಕಂಡು ವ್ಯಥಿಸುವುದಂತೆಯೇ ॥ ಸಹಿಸದು ಅಪಸ್ವರ ಕರ್ಣವು ದಿವ್ಯ ಸ್ವರ । ಸಹಿಪುದು ಆನಂದದಿಂದಿ ಕರ್ಣಗಳು ॥ ೧ ॥ ಶೀತೋಷ್ಣ ಏರಿಳಿತಗಳಂತೆ ಸುಖ ದುಃಖ ಆತುಕೊಂಡಿರುವುವು ಜೀವಗೆ ಸತತ । ಏತದಂತೆ ಹಿಗ್ಗುವ ತಗ್ಗುವ ನೆಲೆಗೆ । ಭೀತಿಗೊಳ್ಳದೆಲೆ ಗೆಲ್ವುದು ದ್ವಂದ್ವವ ॥ ೨ ॥ ನೆಲೆಯಿಲ್ಲದ ಇಬ್ಬಗೆಯ ವೇದನೆಯ । ಸಲೆ ಸಹಿಸುತೆ ದ್ವಂದ್ವಾತೀತ ಸ್ಥಿತಿಗೆ । ಹಲುಬದೆ ಏರು ನೀ ಎಂದನು ಪಾರ್ಥಗೆ । ಜಲಜನಾಭ ಹರಿ ದಾಸಕೇಶವನುತ । ೩ ।

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ।**
**ಸಮದುಃಖಸುಖಂ ಧೀರಂ ಸೋऽಮೃತತ್ವಾಯ ಕಲ್ಪತೇ ॥ ೧೫ ॥**

ಎಲೈ ಪುರುಷ ಶ್ರೇಷ್ಠನೇ, ಯಾವ ಪುರುಷನನ್ನು ಇವು ವ್ಯಥೆಗೊಳಿಸುವುದಿಲ್ಲವೋ, ಸುಖದಲ್ಲಿಯೂ, ದುಃಖದಲ್ಲಿಯೂ ಸಮನಾಗಿರುವ ಆ ಜಾಣನು ಮೋಕ್ಷಕ್ಕೆ ತಕ್ಕವನಾಗುವನು.

ರಾಗ – ಭೈರವಿ ತ್ರಿತಾಳ.

ಸುಖದೊಳ್ ಕುಗ್ಗದಿರ್ । ದುಃಖದೊಳ್ ಹಿಗ್ಗದಿರ್ ॥ ಕಷ್ಟಕೆ ಜಗ್ಗದೆ । ದೇವನ ಮರೆಯದಿರ್ ॥ ಪ ॥ ಇಂದ್ರಿಯ ವಿಷಯಂಗಳ್ಗೆ ಆಗುವ ಸಂಬಂಧ । ದ್ವಂದ್ವಯುಕ್ತವಾಗಿಹುದದ ತಡೆದು ॥ ಇಂದಿರಾತ್ಮನನು ಹೊಂದಿ ಸುಖಿಸುತಲೆ । ಬಂಧನ ನಿವೃತ್ತಿಗೊಳಿಸಲು ಮುಕ್ತಿಯು ॥ ೧ ॥ ಅವಿನಾಶಿ ತತ್ತ್ವವ ನೆನೆಯುವನವ ಮುಕ್ತ । ಭವದ ದ್ವಂದ್ವಗಳ ಮೀರಿದವ ಮುಕ್ತ ॥ ಬವಣೆಯಂ ಕಳೆಯಲು ಎನಗರ್ಪಿಸು ಫಲ । ನೆವ ಬಿಟ್ಟೇಳೆಂದ ದಾಸ ಕೇಶವನುತ ॥ ೨ ॥

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ।**
**ಉಭಯೋರಪಿ ದೃಷ್ಟೋऽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**

ಅಸತ್ಪದಾರ್ಥಕ್ಕೆ ಇರುವಿಕೆ ಇಲ್ಲ, ಸತ್ಪದಾರ್ಥಕ್ಕೆ ಇಲ್ಲದಿರುವಿಕೆ ಇಲ್ಲ. ತತ್ತ್ವವನ್ನು ಮನಗಂಡವರು ಈ ಎರಡು ವಿಷಯಗಳ ನಿಜವನ್ನೂ ಕಂಡಿರುವರು.

ರಾಗ – ಬಹಾರ್ ತ್ರಿತಾಳ.

ಇಲ್ಲದ ವಸ್ತುಗೆ ಇರುವಿಕೆ ಇಲ್ಲ । ಇರುವ ವಸ್ತುವಿಗೆ ಇಲ್ಲದಿರುವಿಕೆ ಇಲ್ಲ. ॥ ಪುಲ್ಲಲೋಚನನ ಶ್ರೀ ಹರಿಪದ ರುಚಿಯ ಮೆಲ್ಲದವರಿಗೀ ಸೊಲ್ಲೇ ತಿಳಿಯದು ॥ ೧ ॥ ಕಾಣಿಸಿಕೊಂಬುವ ಸಕಲ ವಸ್ತುವಿಗೆ । ಸ್ಥಾಣು ಸ್ಥಿತಿಯದಿಲ್ಲವು ಆತ್ಮನಿಗೆ । ಸ್ಥಾಣು ಅಚಲ ಸನಾತನವೆಂಬರು । ಕಾಣದಿರುವುದದು

ಚರ್ಮಚಕ್ಷುಗೆ ॥ ೨ ॥ ಆತ್ಮ ಸನಾತನ ಆತ್ಮ ಚೈತನ್ಯ । ಆತ್ಮ ಅವಿನಾಶಿ ಅಚಲತತ್ತ್ವವು ॥ ಆತ್ಮಾನಾತ್ಮ ವಿಚಾರಗೈಯುತ । ಪರಮಾತ್ಮನಡಿಯ ಸೇರ್ವುದು ಫಲ್ಗುಣನೆ ॥ ೩ ॥ ಆನಂದಭರಿತ ಸ್ಥಿತಿಯದು ಸತ್ ಚಿತ್ । ಆನಂದಮಯವು ಭಗವತ್ಸುಖವು ॥ ಆನಂದ ಸ್ವರೂಪ ಕಾಣುತ ಸುಖಿಸುತೆ । ಬಂಧತೊಡೆಯೋದ ದಾಸಕೇಶವನುತ ॥ ೪ ॥

**ಅವನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹಸಿ ॥ ೧೭ ॥**

ಯಾವುದರಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೋ ಅದನ್ನೇ ವಿನಾಶವಾಗದೆಂದು ತಿಳಿ. ಎಂದಿಗೂ ಸವೆಯದ ಅದನ್ನು ಇಲ್ಲವಾಗಿಸುವುದಕ್ಕೆ ಯಾವನಿಂದಲೂ ಆಗಲಾರದು.

ರಾಗ – ಹಿ. ಭೈರವಿ. ತ್ರಿತಾಳ.

ಆತ್ಮ ಜಗದ್ವ್ಯಾಪಕಾ ॥ ಪರಮಾತ್ಮ ಜಗದ್ವ್ಯಾಪಕಾ॥ ಆತ್ಮಾನಾತ್ಮ ವಿಚಾರದಿ ಜಗದೊಳು ಅವಿನಾಶಿ ತತ್ತ್ವವ ತಿಳಿಯೋ ನೀ ಪಾರ್ಥ ॥ ೧ ॥ ಸಿಗದದು ಮನಸಿಗೆ ಬುದ್ಧಿಗಗೋಚರ । ಸಿಗದು ಇಂದ್ರಿಯಕೆ ಜಗದೊಳು ವ್ಯಾಪ್ತ । ಬಗೆ ಬಗೆ ಸಾಧನೆ ಗೈದರೂ ಸಿಗದದು । ಮಿಗೆ ಕೃಪೆಯಾಗಲು ತೋರಿಕೊಂಬುದ ॥ ೨ ॥ ನಾಶವಸ್ತುವಿನಂ ತಿಳಿಯಲಸಾಧ್ಯವು । ಭಾಸುರ ತೇಜಃಪುಂಜ ಸ್ವರೂಪ ॥ ಕ್ಲೇಶಗೊಳದಲೆ ಮಾಡು ಕದನವನು । ಲೇಶ ಭಯ ಬೇಡೆಂದ ದಾಸ ಕೇಶವನುತ ॥ ೩ ॥

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥**

ನಿತ್ಯನೂ, ನಾಶರಹಿತನೂ, ಯಾವ ಪ್ರಮಾಣಗಳಿಗೂ ನಿಲುಕದವನೂ ಆಗಿರುವ ದೇಹಿಯ ಈ ದೇಹಗಳು ಕೊನೆಗಾಣುವಂಥವು ಎಂದು ಬಲ್ಲವರು ಹೇಳುತ್ತಾರೆ. ಎಲೈ ಭರತವಂಶೋತ್ಪನ್ನನೆ, ಆದ್ದರಿಂದ ಯುದ್ಧವನ್ನು ಮಾಡು.

ರಾಗ – ತಿಲಕಾಮೋದ ತ್ರಿತಾಳ.

ಎಂದೆಂದಿಗೂ ಇರುವ । ಆತ್ಮಗೆ । ಹೊಂದಿ ಹೋಗಿ ಬರುವ ॥ ಕುಂದಿದ ದೇಹವು ಬಂಧನವಾಗಿರೆ । ಎಂದೆಂದಿಗೂ ಅಜ್ಞಾನವೇ ತೊಲಗದು ॥ ೧ ॥ ದೇಹ ಆತ್ಮಗಳನು ಪೃಥಕ್ಕರಿಸಿ ॥ ಬಾಹ–ಕಷ್ಟ ಸುಖಗಳನು ಮೋಹನೀಗಿ ವೈರಾಗ್ಯತಾಳಿ ಜಗನ್ಮೋಹಕ ಪಿತನಡಿದಾವರೆ ಸೇವಿಸು ॥ ೨ ॥ ಆತ್ಮ ಒಂದೇ ಸ್ಥಿರವು । ಆತ್ಮಗೆ ಬರ್ಪ ದೇಹವಸ್ಥಿರವು ॥ ಆತ್ಮೋದ್ಧಾರವ ಗೈಸಲು ಪಡೆ ಪರಮಾತ್ಮನ ಜ್ಞಾನವನ್ನು ನಿರ್ಮಲ ಚಿತ್ತದಿ ॥ ೩ ॥ ಧರ್ಮಯುಕ್ತ ಪಥಮೊಳ್ । ಸತತವು ಕರ್ಮವ ಗೈಯುವುದೂ ॥ ಕರ್ಮಫಲದ ಪ್ರತಿಫಲ ಬಯಸದೆ ಗೈಯಲು । ನಿರ್ಮಲವಾದವುದೆಮ್ಮ ಚಿತ್ತವೂ ॥ ೪ ॥ ಅಜ್ಞಾನವ ಬಿಟ್ಟು ಕೈದುಗೊಳ್ । ಕರ್ಮಫಲವ ಸುಟ್ಟು ॥ ಸುಜ್ಞಾನವನಿದಕೇಳಿ ಕದನ ಕೊಡು ಎಂದು ಬೋಧಿಸಿದ ದಾಸ ಕೇಶವನುತ ॥ ೫ ॥

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧೯ ॥**

ಈ ಆತ್ಮನು ಕೊಲ್ಲುವವನೆಂದು ಯಾವನು ಎಣಿಸುವನೋ ಮತ್ತು ಇವನು ಹತನಾಗುವವನೆಂದು ಯಾವನು ಎಣಿಸಿರುವನೋ ಅವರಿಬ್ಬರೂ ನಿಜವನ್ನರಿಯರು. ಈತನು ಕೊಲ್ಲುವುದೂ ಇಲ್ಲ. ಹತನಾಗುವುದೂ ಇಲ್ಲ.

ರಾಗ – ಸಾರಂಗ ರೂಪಕ ತಾಳ.

ದೇಹ ಮರ್ತ್ಯ ಆತ್ಮ ಅಮರ । ದೇಹಾತೀತ ವಸ್ತುವು ॥ ದೇಹ ಪಂಚ ಭೂತ ಜನ್ಯ। ಆತ್ಮ ಜನನ ರಹಿತವು ॥ ಪ ॥ ದೇಹ ಹುಟ್ಟಿ ಸಾಯುತಿಹುದು। ಆತ್ಮ ಅದಕತೀತವು ॥ ದೇಹ ಜರಾ ಮರಣ ಪಡೆಯೆ। ಆತ್ಮ ಒಂದೇ ಸ್ಥಿತಿಯದೂ ॥ ೧ ॥ ದೇಹ ಹೊಡೆತ ಕಡಿತ ಬಡಿತ ಗೈದು ದುಃಖ ಪಡೆವುದೂ॥ ಆತ್ಮವೇನೂ ಗೈಯದೆ । ಸ ಚ್ಚಿ ದಾ ನಂ ದ ಮಯವಾಗಿಹುದು ॥ ೨ ॥ ಆತ್ಮ ಕೊಲ್ಲುವವನು ಎಂದು । ಆತ್ಮ ಸತ್ತು ಜನಿಪನೆಂಬುವ। ಆತ್ಮ ಜ್ಞಾನ

ರಹಿತನೂ ॥ ೩ ॥ ಆತ್ಮ ಕೊಲ್ಲುವುದೂ ಇಲ್ಲ । ತಾನು ಕೊಲ್ಲಿಸಿಕೊಂಬುದಿಲ್ಲ। ಆತ್ಮ ರಹಸ್ಯವರಿತು ಜ್ಞಾನಿಯಾಗೆಂದ ದಾಸಕೇಶವಸುತ ॥ ೪ ॥

**ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**

ಇವನು ಹುಟ್ಟುವುದಿಲ್ಲ, ಸಾಯುವುದಿಲ್ಲ. ಇವನು ಒಮ್ಮೆ ಇದ್ದು, ಇನ್ನೊಮ್ಮೆ ಇರುವುದಿಲ್ಲವೆಂಬುದೂ ಇಲ್ಲ. ಇವನು ಹುಟ್ಟಿಲ್ಲದವನು, ನಿತ್ಯನು. (ಸಾವಿಲ್ಲದವನು) ಎಂದೆಂದಿಗೂ ಇರುವ ಪುರಾತನನು. ಶರೀರವು ಹತವಾದರೂ ಹತನಾಗುವುದಿಲ್ಲ.

ರಾಗ—ತಿಲಂಗ ತ್ರಿತಾಳ

ಜನನ ವಿಲ್ಲದವನು । ಆತ್ಮನು । ಮರಣವಿಲ್ಲದವನು ॥ ಮೊದಲಿಗೂ ಮೊದಲಿಗ ಕೊನೆಗೂ ಕೊನೆಯವ । ಮೊದಲು ಕೊನೆಗೂ ಅತೀತನಾದವನು ॥ ೧ ॥ ಮೊದಲಿದ್ದವನಿವನೆಂದನ್ನಿಸಿತಾ ಕೊನೆಗಿಲ್ಲದವನು ಎಂಬಾಗನಿವನು । ಹುಟ್ಟಿಲ್ಲದವನಿವ ಸಾವಿಲ್ಲದವನಿವ । ಬದಲಾಗದವನಿವ ಬೆಳೆಯದಿರುವನು ॥ ೨ ॥ ದೇಹವ ಕೊಂದರೂ ಸಾಯದವನು ಇವ। ದೇಹಾತೀತನು ನಿತ್ಯನವ್ಯಯನು। ಸಾವು ನೋವುಗಳಿಗಾಚೆ ಇರುವನಿವ। ಭಾವವಿದನರಿತು ಕರ್ಮವ ಗೈವುದು ॥ ೩ ॥ ದೇಶಕಾಲ ಸರ್ವತ್ರದಿವ್ಯಾಪ್ತನು । ಆಶಪಾಶಗಳ ತರಿಯೆ ದೊರೆವನು ॥ ಲೇಸಾಗ್ಸುದು ಪ್ರತಿಫಲ ಬಯಸದೆ ನೀ। ಕರ್ಮ ಮಾಡೆಂದ ದಾಸಕೇಶವಸುತ ॥ ೪ ॥

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥ ೨೧ ॥**

ಈತನು ವಿನಾಶವಿಲ್ಲದವನು. ನಿತ್ಯನು ಹುಟ್ಟಿಲ್ಲದವನು, ಸವೆಯದವನು ಎಂದು ಯಾವಾತನು ಅರಿತುಕೊಳ್ಳುವನೋ ಆ ಪುರುಷನು ಎಲೈ ಪಾರ್ಥನೆ, ಯಾರನ್ನು ಹೇಗೆ ಕೊಲ್ಲುವನು ? ಯಾರಿಂದ ಹೇಗೆ ಕೊಲ್ಲಿಸುವನು ?

ರಾಗ—ತಿಲಂಗ ತ್ರಿತಾಳ

ಆತ್ಮ ತತ್ತ್ವವರಿತ । ಜ್ಞಾನಿಯು । ಪರಮಾತ್ಮನ ಅರಿತು । ಅವಿನಾಶಿಯು ಅಬಾಧಿತನಜನಿವನೆಂ । ದರಿಯುತ ಸುಖ ಶಾಂತಿಯೊಳಿರುವ ॥ ೧ ॥ ಹೊಡೆಯನು ಕಡಿಯನು ಪ್ರತಿಫಲದಿಚ್ಛೆಯಿಂ । ನಡೆಸುವ ಸ್ವಧರ್ಮ ನಿಷ್ಕಾಮದಿತಾ ॥ ೨ ॥ ದೇಹಾತೀತ ಮನಬುದ್ಧಿಗತೀತವು । ಶ್ರೇಯ ಪಥವೆಂದು ತಿಳಿಯುತ ನಿರತ ॥ ೩ ॥ ದೇವಪ್ರೀತ್ಯರ್ಥ ಕರ್ಮ ನಡೆಸುವನು । ಅಂತೆಯೇ ನಡೆ ಎಂದ ದಾಸಕೇಶವನುತ ॥ ೪ ॥

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ–**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

ಹೇಗೆ ಮನುಷ್ಯನು ಹರಿದ ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸತನ್ನು ತೆಗೆದುಕೊಳ್ಳುವನೋ ಅದರಂತೆಯೇ ಈ ದೇಹಿಯು ಮುದಿಯಾದ ಶರೀರಗಳನ್ನು ಬಿಟ್ಟು ಹೊಸ ಶರೀರಗಳನ್ನು ಹೊಂದುತ್ತಾನೆ.

ರಾಗ—ಭೀಮ್‌ಪಲಾಸ್ ತ್ರಿತಾಳ

ಜನನಮರಣಗಳು ತಪ್ಪಿದುದಲ್ಲ । ಘನಮಹಿಮನ ಪಾದ ಸೇರವತನಕ ॥ ಪ ॥ ಜನ್ಮದಿಂ ಜನ್ಮಕೆ ಸಂಸ್ಕಾರಗಳ ಹೊತ್ತು । ಜನ್ಮಮರಣ ದುಃಖ ತಳೆವನು ಜೀವ । ಸಲುಗಿದ ಬಟ್ಟೆಯು ಬಿಸುಟ್ಟೊಸತುಡುವಂತೆ

ಹಲವು ದೇಹಗಳ ಧರಿಪನು ಜೀವ ‖ ೧ ‖ ಸಂಚಿತಕರ್ಮದ ಒಂದಂಶ ಪ್ರಾರಬ್ಧ । ಹಂಚುವನಾವಿಧಿ ದೇಹ ಧರಿಸಲು ‖ ಸಂಚರಿಪನು ಜೀವ ಭವಾರಣ್ಯದಲಿ । ಮುಂಚಿನ ಕರ್ಮವ ಭೋಗಿಸಲೋಸುಗ ‖ ೨ ‖ ಮುಕ್ತ ಸ್ಥಿತಿಯೊಳ್ ಜನನ ಮರಣವಿಲ್ಲ । ಬಂಧನಿವೃತ್ತಿಯುದದುವೇ ಮುಕ್ತಿ ‖ ಪ್ರತಿಫಲ ಬಯಸದೆ ಕರ್ಮವ ನಡೆವುದು । ಸ್ವಧರ್ಮ ನಡೆಸೆಂದ ದಾಸಕೇಶವನುತ ‖ ೩ ‖

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ‖ ೨೩ ‖**

ಇವನನ್ನು ಶಸ್ತ್ರಗಳು ಕಡಿದು ತುಂಡರಿಸಲಾರವು. ಇವನನ್ನು ಬೆಂಕಿಯು ಸುಡಲಾರದು ಮತ್ತು ಇವನನ್ನು ನೀರು ನೆನೆಯಿಸಲಾರದು. ಗಾಳಿಯು ಒಣಗಿಸಲೂ ಆರದು.

ರಾಗ—ಪಟ್ದೀಪ್ ತ್ರಿತಾಳ

ಆಯುಧಗಳು ತುಂಡರಿಸವು ಆತ್ಮನ । ಸಾಯನು ಹುಟ್ಟನು ಬದಲಾಗದು ಆತ್ಮ ‖ ಪ ‖ ಅಗ್ನಿಯು ಸುಡಲಾರದು ಚೈತನ್ಯವು । ಜಲನೆನೆಸದು ಆ ಶಕ್ತಿ ತತ್ತ್ವವ । ಗಾಳಿ ಒಣಗಿಸದು ಖಡ್ಗ ತುಂಡರಿಸದು । ಹೇಳಲಾಗದ ಅದ್ಭುತ ಶಕ್ತಿ ಆತ್ಮ ‖ ೧ ‖ ವಾಯುವೇ ಮುಂತಾದ ಪಂಚ ಭೂತಗಳಿಗೆ । ನಾಯಕನವ ಕೇಳು ಲೋಕಕೆ ‖ ತಾಯಿ ತಂದೆತಾನಖಿಳ ಜಗಗಳಿಗೆ । ಯಾವುದು ಅಸಾಧ್ಯ ಅಂತಹ ತತ್ತ್ವಕೆ ‖ ೨ ‖ ಅಂತಹ ತತ್ತ್ವವೇ ಸರ್ವ ವ್ಯಾಪಿಯುದು । ಅಂತಹ ತತ್ತ್ವವೇ ನಿನ್ನೊಳಗಿಹುದು ‖ ಕೌಂತೇಯನೆ ಕರ್ತೃತ್ವವ ಬಿಟ್ಟೀಳು ಚಿಂತೆಬೇಡೆಂದನು ದಾಸಕೇಶವನುತ ।೩।

**ಅಚ್ಛೇದ್ಯೋऽಯಮದಾಹ್ಯೋऽಯ ಮಕ್ಲೇದ್ಯೋऽಶೋಷ್ಯ— ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋऽಯಂ ಸನಾತನಃ ‖ ೨೪ ‖**

ಇವನು ತುಂಡರಿಸುವುದಕ್ಕೆ ಆಗದವನು. ಇವನು ಸುಡುವುದಕ್ಕಾಗ ದವನು, ತೋಯಿಸುವುದಕ್ಕಾಗದವನು, ಒಣಗಿಸುವುದಕ್ಕೂ ಆಗದವನು; ಇವನು ನಿತ್ಯನು. ಎಲ್ಲೆಲ್ಲಿಯೂ ಇರುವವನು. ಸ್ಥಿರವಾಗಿರುವವನು. ಅಲುಗಾಡದವನು. ಎಂದಿನಿಂದಲೂ ಹೀಗೆಯೇ ಇದ್ದುಕೊಂಡಿರುವವನು.

ರಾಗ – ಸಾರಂಗ ರೂಪಕ ತಾಳ.

ಸರ್ವವ್ಯಾಪಿ ಸರ್ವೋತ್ತಮ ಸರ್ವಜ್ಞನು ಆತ್ಮಾ । ಸರ್ವಶಕ್ತ ಸಚ್ಚಿದಾನಂದ ನಿತ್ಯ ನಿರ್ಮಲಾತ್ಮ ॥ ಪ ॥ ಅಚ್ಛೇದ್ಯನು ಅತುಳನಮಿತ । ಅಚಲ ಅಕ್ಷರ ರೂಪನು ॥ ಅವಿಕಾರನು ಅವಿನಾಶಿಯು ಸ್ಥಾಣುಸನಾತನನು ॥ ೧ ॥ ನಿತ್ಯನಿರಾಮಯನು ನಿರ್ವಿಕಾರನು ನಿಗಮ ವೇದ್ಯನು । ಸತ್ಯಸದಾನಂದ ಸಚ್ಚಿದಾನಂದ ಸ್ವರೂಪನು ॥ ೨ ॥ ಹಿಂದಿನಿಂದಲೊಂದೇ ರೀತಿ ಇರುವ ಭಕ್ತ ಸನ್ನುತ । ಸಂದೇಹವ ಬಿಟ್ಟೀಳೆಂದ ದಾಸಕೇಶವಸನ್ನುತ ॥ ೩ ॥

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯ**
**ಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

ಇವನು ಇಂದ್ರಿಯಗಳಿಗೆ ತೋರದವನು, ಮನಸ್ಸಿನಿಂದ ಯೋಚಿಸಿ ಕೊಳ್ಳುವುದಕ್ಕಾಗದವನು, ಮಾರ್ಪಡಿಸಲಿಕ್ಕಾಗದವನು - ಎನಿಸಿಕೊಂಡಿರುವನು ಈತನು ಹೀಗಿರುವನೆಂಬುದನ್ನು ಮನದಂದುಕೊಂಡು ಶೋಕಿಸದಿರು.

ರಾಗ – ಹಿ. ಭೈರವಿ ಝಂಪೆತಾಳ.

ಇಂದ್ರಿಯಾತೀತ ಊಹೆಗೆ ಸಿಲುಕದಿಹ ಶಕ್ತಿ । ಬದಲಾಗದಿಹ ಜ್ಯೋತಿ ಚಿದ್ಘನನು ಆತ್ಮ ॥ ಪ ॥ ಇಂದ್ರಾದಿ ಸನ್ನುತನು । ಚಂದ್ರ ಸೂರ್ಯಾಭಿನಮಿತ । ಸಂದರುಶನಕೆ ಬಹಳ ದುರ್ಲಭನು ಆತ್ಮ ॥ ೧ ॥ ಮನದೊಳಗೆ ಮನವಾಗಿ ಮನಕೆ ಸಿಲುಕದ ಜ್ಯೋತಿ । ಮನನ ನಿಧಿಧ್ಯಾಸನ ಗೈವರಿಗೆ

ದೋರಿವ | ಮನಬುದ್ಧಿಗವ ಹೊರತು | ಚಿತ್ತದೊಳು ಬಿಂಬವನು | ಕೋಟಿ ಸೂರ್ಯಪ್ರಕಾಶ ಆತ್ಮನಿವನು || ೨ ||ಸದ್ಭಕ್ತಿಯಲಿ ನೆನೆದು | ಸದ್ವಿಚಾರವ ಕೇಳಿ | ಸಚ್ಚಿದಾನಂದನನು ಅರಿಯುವುದು ಪಾರ್ಥ|| ಸುವಿಚಾರದಲಿ ನಡೆದು ದಾಸಕೇಶವಸುತನ | ಸತತ ನೆನೆವನೆ ಜೀವನದೊಳವ ಕೃತಾರ್ಥ || ೩ ||

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ||**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ || ೨೬ ||**

ಹೀಗಿದ್ದರೂ, ಇವನು ನಿತ್ಯವೂ ಹುಟ್ಟುತ್ತಲಿರುವನು, ನಿತ್ಯವೂ ಸಾಯುತ್ತಿರುವನು - ಎಂದುಕೊಂಡಿರುವೆಯಾದರೆ, ಆಗಲೂ, ಎಲೈ ಮಹಾಬಾಹುವೇ, ಹೀಗೆ ನೀನು ಶೋಕಿಸತಕ್ಕದ್ದಲ್ಲ.

ರಾಗ -ತಿಲಕಾಮೋದ ತ್ರಿತಾಳ.

ವ್ಯಥಿಸಬೇಡ ಪಾರ್ಥ | ಕೃತಾರ್ಥ || ವ್ಯಥಿಸಬೇಡ || ಜನನ ಮರಣ ಕಥೆಯಿದು | ಸತತ ನಡೆದಿಹುದು ಲೋಕದೋಳ್ ಸಹಜಾ ||ಪ|| ಕಂಡುಬರುವದಿದು ಕೊಂಡು ಹೋಗುವುದು | ಉಂಡು ಪಾಪ ಪುಣ್ಯಗಳ ಫಲವ | ಚಂಡಯಮನವರ ಕೈಗೆ ಸಿಲುಕಿ | ಪ್ರಚಂಡ ಕಾಲ ಚಕ್ರದೊಳು ತಿರುಗುವುದು || ೧ || ಸಾವದು ನೈಜವು ಹುಟ್ಟಿದಾ ಬಳಿಕ | ಸಾವದು ದೇಹಕೆ ಆತ್ಮನಿಗಲ್ಲಾ || ಭಾವಿಸಲೆಲ್ಲವು ಎನ್ನಯ ಲೀಲೆಯು | ಭಾವವಿದನರಿತು ಕರ್ಮವ ಗೈಯು ನೀ || ೨ || ಏಸು ಚಿಂತಿಸಿದರಿದ ನೀ ತಪ್ಪಿಸಲಾರೆಯಾದ್ದರಿಂ ಕೊಡು ನೀ ಕದನ || ಲೇಸು ಕೆಡಕುಗಳ ಅರ್ಪಿಸು ಎನಗೆಂದ | ದಾಸಕೇಶವ ಸುತ ಇಂದ್ರ ತನಯನಿಗೆ || ೩ ||

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ|**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ || ೨೭ ||**

ಏಕೆಂದರೆ ಹುಟ್ಟಿದವನಿಗೆ ಸಾವು ತಪ್ಪದೇ ಆಗುವುದು; ಹೀಗಿರುವುದರಿಂದ ತಪ್ಪಿಸಲಾಗದ ಈ ವಿಷಯವನ್ನು ಕುರಿತು ನೀನು ಶೋಕಿಸಬಾರದು.

ರಾಗ – ಕಾಫಿ ತ್ರಿತಾಳ

ಸಾವು ದಿಟವು ಹುಟ್ಟಿದಗೆ ಅವನಿಯೊಳ್ । ನೋವು ದಿಟವು ಜಗದೊಳ್ ಜನಿಸಿದಗೆ ॥ ಪ ॥ ಸಾಯುವ ಹುಟ್ಟುವ ಉರುಳಾಟ ತಪ್ಪಿಸೆ । ಕಾಯುವ ದೇವನ ಅಡಿಗಳ ನೆನೆದು ॥ ಕಾಯ ವಾಕ್ಕು ಮನಶುದ್ಧಿಯಿಂ ಆಶೆಯ ಮಾಯವಾಗಿರಲು ದೊರೆಯುವುದು ಮುಕ್ತಿ ॥ ೧ ॥ ಸತ್ತಂಗೆ ಜನನವು ಜನಿಸಲು ಮೃತ್ಯುವು ॥ ಹತ್ತಿಕೊಂಡು ಬರ್ಪುದು ಹೆಡತಲೆಯೊಳ್ ॥ ಚಿತ್ತ ವೃತ್ತಿಗಳ ದೂರೀ ಕರಿಸುತೆ । ಮುಕ್ತಿ ಕನ್ನಿಕೆಯ ಕರವ ಹಿಡಿಯುವುದೂ ॥ ೨ ॥ ತಪ್ಪಿಸಲಾಗದ ಜನನ ಮರಣ ಭಯ । ತಪ್ಪಿಸಕೊಂದೇ ಮಾರ್ಗ ಧನಂಜಯ ॥ ಇಪ್ಪಾಗ ತ್ಯಜಿಸುತೆ ಕರ್ಮದ ಫಲಕಳ । ಒಪ್ಪಿಸೆನಗೆ ಎಂದ ದಾಸಕೇಶವನುತ ॥ ೩ ॥

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

ಪ್ರಾಣಿಗಳು ಮೊದಲು ಕಾಣದೆ ಇದ್ದು ಕೊಂಡಿರುವುವು. ನಡುವೆ ಕೆಲಕಾಲ ತೋರಿಕೊಳ್ಳುವವು. ಕೊನೆಗೆ ಕಾಣದಂತೆಯೇ ಸತ್ತುಹೋಗುವವು. ಇದಕ್ಕಾಗಿ ಚಿಂತಿಸುವದೇಕೆ ?

ರಾಗ—ಭೀಮ್‌ಪಲಾಸ್ ತ್ರಿತಾಳ

ಮೊದಲು ಕಾಣಿಸದೆ ಸೂಕ್ಷ್ಮದೊಳಿರುವವು । ಒದಗಲು ಕಾಲವು ಕಾಣಿಸಿಕೊಂಬರು ॥ ಪ ॥ ಮೂಲ ಪ್ರಕೃತಿಯ ರೂಪದೊಳ್ ಇರುತಲಿ । ಕಾಲಬರಲು ಸೂಕ್ಷ್ಮಸ್ಥೂಲವಾಗ್ಪುದು ॥ ಕಾಲಾತೀತ ಹರಿ ಇಚ್ಛೆ

ಸಿದಾಗಲೇ ಮೂಲ। ಬದಲಾಗಿ ಸ್ಥೂಲವಾಗ್ವುದು ॥ ೧ ॥ ಪಂಚ ಭೂತಾತ್ಮಕ ದೇಹವ ಧರಿಸುತೆ । ಕೊಂಚ ಕಾಲ ಪ್ರಪಂಚದೊಳ್ ತೋರಿ । ಸಂಚಿತಾದಿ ಕರ್ಮಗಳನೊಡಗೊಂಡು । ಸಂಚರಿಪನು ಜೀವ ಅನಂತ ತನುವಿನೊಳ್ ॥ ೨ ॥ ತೋರಿ ಜಾರುವುವು ಪ್ರಾಣಿಕೋಟಿಗಳು ಸಾರಾಸಾರವನರಿತವ ಜ್ಞಾನಿ । ತೋರಿ ಅಡಗುವುದು ದೇಹವದಾತ್ಮವು। ತೋರಿ ಅಡಗದೆಂದ ದಾಸಕೇಶವನುತ ॥ ೩ ॥

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ–ನ ಚೈವ ಕಶ್ಚಿತ್ ॥ ೨೯ ॥**

ಈ ಆತ್ಮನನ್ನು ಒಬ್ಬನು ಯಾವದೋ ಒಂದು ಅದ್ಭುತವನ್ನು ತಿಳಿಸುವಂತೆ ಮಿಕ್ಕವರಿಗೆ ತಿಳಿಯ ಹೇಳುವನು. ಇನ್ನೊಬ್ಬನು ಅದ್ಭುತವನು ಕೇಳುವಂತೆ ಇವನ ವಿಷಯ ಕೇಳುತ್ತಿರುವನು. ಹೀಗೆ ಕೇಳಿದ ಮೇಲ್ನೂ ಯಾರು ಇವನನ್ನು ಅರಿಯದೆ ಇರುವರು.

ರಾಗ—ಮೋಹನ ತ್ರಿತಾಳ

ಆಶ್ಚರ್ಯ ಆಶ್ಚರ್ಯ ಆತ್ಮವಿಚಾರ। ಆಶ್ಚರ್ಯ ಆಶ್ಚರ್ಯ ಜ್ಞಾನ ಅಪಾರ ॥ ಪಲ್ಲ ॥

ಅಚ್ಚರಿ ಕಂಡಂತೆ ಕಾಂಬನು ಓರ್ವ । ಅಚ್ಚರಿ ಪೇಳ್ದಂತೆ ಪೇಳ್ವನಿನ್ನೋರ್ವ ॥ ಅಚ್ಚರಿ ಕೇಳ್ವಂತೆ ಕೇಳ್ವನ್ ಮತ್ತೋರ್ವ ! ಅಚ್ಚರಿಯೆಂದಿವನೋರ್ವನು ಸಾರ್ವ ॥ ೧ ॥ ಕಂಡರೂ ತಿಳಿಯದು ಹೇಳಲು ಬಾರದು । ಪುಂಡರೀಕಾಕ್ಷನ ನೈಜಸ್ವರೂಪ ॥ ದಂಡಿಸಿ ದೇಹವ ಅಂಡಲೆದರೂ ಇದು । ಕಂಡು ತಿಳಿಯಲಸಾಧ್ಯ ಅಶಕ್ಯ ॥ ೨ ॥ ಅನುಭವಗೋಚರ ಇಂದ್ರಿಯಕಗೋಚರ ।

ಹುನನ ಗೈದವರು ತಿಳಿಯುವರಿದನು ॥ ಮುನಿಮನದಲಿ ಪ್ರತಿಬಿಂಬಿಪುದಿದನೀ।
ಅನುಭವಿಸೆಂದನು ದಾಸಕೇಶವನುತ ॥ ೩ ॥

**ದೇಹೀ ನಿತ್ಯಮವಧ್ಯೋಽಯ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

ಎಲೈ ಭರತ ವಂಶೋತ್ಪನ್ನನೇ, ಎಲ್ಲರ ದೇಹದಲ್ಲಿಯೂ ಇರುವ ಈ ದೇಹಿಯು ಎಂದಿಗೂ ವಧ್ಯನಲ್ಲ. ಆದ್ದರಿಂದ ನೀನು ಯಾವ ಪ್ರಾಣಿಗಳ ವಿಷಯದಲ್ಲಿಯೂ ಶೋಕಿಸಬಾರದು.

ರಾಗ—ಕಂಬಾವತಿ ತ್ರಿತಾಳ

ಆತ್ಮನು ಅವಧ್ಯ ದೇಹವನಿತ್ಯ । ಆತ್ಮತತ್ತ್ವ ಅವಿನಾಶಿಯು ಸತ್ಯ ॥ಪ।
ಪಂಚಭೂತಾತ್ಮಕ ವಂಚಿಪದೇಹ । ಪಂಚರೂಪಾತ್ಮಕ ಆತ್ಮನಿದೇಹ ॥
ಚಂಚಲ ಮಿಂಚಿನ ಗೊಂಚಲ ತೆರದಿ । ಪ್ರಪಂಚ ಭೋಗವು ತೆರೆಗಳ ತೆರದಿ।
॥ ೧ ॥ ಆತ್ಮನೆ ಶಾಶ್ವತ ಆತ್ಮನೆ ಅವಿನಾಶಿ । ಆತ್ಮಸ್ವರೂಪವೆ ಸಚ್ಚಿದಾನಂದ।
ಆತ್ಮಾಂತರ್ಗತ ದಾಸಕೇಶವನುತ ॥ ಆತ್ಮತತ್ತ್ವವಿದ ನರಿ ನೀ ಪಾರ್ಥ ॥ ೨ ॥

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ॥೩೧**

ಸ್ವಧರ್ಮದ ದೃಷ್ಟಿಯಿಂದಲೂ ನೀನು ಎದೆಗುಂದಿ ಧರ್ಮವನ್ನು ಬಿಟ್ಟು ಅತ್ತ ಸರಿಯುವುದು ಸರಿಯಲ್ಲ. ಏಕೆಂದರೆ ಕ್ಷತ್ರಿಯನಿಗೆ ಧರ್ಮವನ್ನು ಮೀರದ ಯುದ್ಧಕ್ಕಿಂತ ಹೆಚ್ಚಿನ ಶ್ರೇಯಸ್ಸೇ ಇರುವುದಿಲ್ಲ.

ರಾಗ—ಸಾರಂಗ ತ್ರಿತಾಳ

ಸ್ವಧರ್ಮವಾಚರಿಸು । ಅರ್ಜುನಾ । ಸ್ವಕರ್ಮ ನೀ ನಡೆಸು ।
ಯೋಧಗೆ ಯುದ್ಧವೇ ಧರ್ಮವೆಂದರಿತು । ಬೋಧಿಪ ತತ್ತ್ವ ಮನದೊಳ

ಗಿಟ್ಟು || ಸಾಧಿಸು ಕದನವ ಕರ್ಮಫಲತ್ಯಜಿಸಿ | ಬಾಧಿಸದಾಗ ನಿನ್ನ ಕರ್ಮವ ಬಂಧ || ೧ || ಧರ್ಮಯುಕ್ತ ಕರ್ಮವು ಅತಿಪಾವನ | ಧರ್ಮವೇ ಮಾನವ ಜೀವಿಗೆ ಜೀವನ | ಧರ್ಮಕೆ ಚ್ಯುತಿಯಿಲ್ಲ ಕದನ ನೀ ಗೈಯ್ಯೊಡೆ | ಕರ್ಮದೊಳ್ ಧುಮುಕೆಂದ ದಾಸಕೇಶವನುತ || ೨ ||

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ |**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧ ಮೀದೃಶಮ್ ||೩೨||**

ತನಗೆ ತಾನೇ ಬಂದೊದಗಿ ತೆರೆದಿರುವ ಸ್ವರ್ಗದ ಬಾಗಿಲಿನಂತಿರುವ ಇಂಥ ಯುದ್ಧವು ಭಾಗ್ಯ ಶಾಲಿಗಳಾದ ಕ್ಷತ್ರಿಯರಿಗೆ ದೊರೆಯುವುದು.

ರಾಗ — ಸೋಹನಿ ತ್ರಿತಾಳ

ಬಂದಿಹುದೀಗ ಸಂದರ್ಭ | ಪಾರ್ಥಾ | ಸ್ಯಂದನದೊಳ್ನಿಂದು ವೀರತ್ವ ತೋರಲು || ಕೊಡು ನೀ ಕದನವ ತಡಮಾಡದೆ | ಗಡಗುಟ್ಟಿಸು ಕಡುತರ ಒಡಲ ಬೀಳಿಸಿ | ಅಡರು ಕೀರ್ತಿ ಶಿಖರವ ಸಡಗರದಲಿ | ಕಡು ಪುಣ್ಯದಿ ದೊರೆತಿಹುದೀ ಸಮಯ || ೧ ||

ಪಡೆಯುವೆ ವೀರಸ್ವರ್ಗವನು ಸತ್ತರೆ | ಸಿಡಿಯದಿರ್ ಸ್ವಧರ್ಮ ಸ್ವಕರ್ಮದಿಂದ | ಕಡುಪಾಪಿಗಳನು ಕೊಂದುಗಳಿಸು ಜಯ | ಒಡನೆಯೆ ಎಂದನು ದಾಸಕೇಶವನುತ ||

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ |**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪ ಮವಾಪ್ಸ್ಯಸಿ || ೩೩ ||**

ಇನ್ನು ನೀನು ಈ ಧರ್ಮವಾದ ಯುದ್ಧವನ್ನು ಮಾಡದೆ ಹೋದರೆ ಆದರಿಂದ ನಿನ್ನ ಧರ್ಮವನ್ನೂ ಕೀರ್ತಿಯನ್ನೂ ಕೂಡ ಕಳೆದುಕೊಂಡು ಪಾಪ ವನ್ನು ಗಂಟುಹಾಕಿಕೊಳ್ಳುತ್ತಿ.

ರಾಗ—ಭೀಮ್‌ಪಲಾಸ್ ತ್ರಿತಾಳ

ಕದನ ಕೊಡದಿದ್ದರೆ । ಅರ್ಜುನಾ । ವದನ ಅಕೀರ್ತಿಯಿಂ ಮಾಸಿ ಹೋಗುವುದು ॥ ಪ ॥ ಧರ್ಮಯುಕ್ತ ಕದನ ಗೈಯದಿರಲು । ಕರ್ಮಯೋಗ ವನು ಮರೆತಂತಾಗ್ವುದು॥ನಿರ್ಮಲ ಕೀರ್ತಿಗೆ ಭಂಗಬರುವುದು। ಮರ್ಮವರಿತು ನೀ ಗೈಯು ಕರ್ಮವನು ॥ ೧ ॥ ಪಥದಿಂ ವಿಮುಖನಾದರೆ ಸಂಭವಿಪುದು । ವ್ಯಥೆಯ ಪಾಪವದು ಗಂಟು ಬೀಳುವುದು । ಹಿತವಚನವನಿದನರಿಯುತೆ ಕದನವ । ಖತಿಯಿಂದೀಯೆಂದ ದಾಸಕೇಶವನುತ ॥ ೨ ॥

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

ಜನರು ನಿನ್ನ ಅಪಯಶಸ್ಸನ್ನು ಎಂದೆಂದಿಗೂ ಆಡಿಕೊಳ್ಳುತ್ತಿರುವರು. ಗೌರವವನ್ನು ಪಡೆದವನಿಗೆ ಕೆಟ್ಟ ಹೆಸರೆಂದರೆ ಸಾವಿಗಿಂತಲೂ ಹೆಚ್ಚಿನದು.

ರಾಗ—ಭೀಮ್‌ಪಲಾಸ್ ತ್ರಿತಾಳ

ಅಳಿವುದು ಕಾಯ ಉಳಿವುದು ಕೀರ್ತಿ । ಉಳಿದರೆ ಯುದ್ಧವ ಬಹುದಪಕೀರ್ತಿ ॥ ಪ ॥ ಅಪಯಶ ಬರುವುದು ಯುದ್ಧ ಗೈಯದೊಡೆ । ಅಪಯಶವೆಂಬುದು ಸಾವಿಗಿಂತಧಿಕ ॥ ಅಪಾರ ಶಕ್ತಿ ಸಂಪನ್ನನು ನೀ ನರ । ಅಪಯಶ ಪಡೆಯದಿರ್ ಅರಿಗಡಣದೊಳು ॥ ೧ ॥ ಕೆಟ್ಟಹೆಸರ್ಗಿಂತ ಕೆಟ್ಟದ್ದ್ಯಾವುದಿದೆ । ಬಿಟ್ಟಿಹೆ ಧನುವನು ರಥದೊಳು ನೀನು ॥ ಕೆಟ್ಟವರೀ ಅರಿಗಳ ಗಡಗುಟ್ಟಿಸು । ಹುಟ್ಟಡಗಿಸು ಎಂದ ದಾಸಕೇಶವನುತ ॥ ೨ ॥

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾಯಾಸ್ಯಸಿ ಲಾಘವಮ್ ॥ ೩೫ ॥**

ನೀನು ಭಯದಿಂದ ಯುದ್ಧ ಮಾಡಿಲ್ಲವೆಂದು ಮಹಾರಥಿಕರು ಎಣಿಸುವರು. ಅವರೆಲ್ಲರಿಗಿಂತಲೂ ಪರಾಕ್ರಮಿಯಾದ ಮಾನ್ಯನಾದ ನೀನು ಅವರಿದಿರ್ಗಡೆ ಲಘುವಾಗುವೆ.

ರಾಗ—ಸೋಹನಿ ತ್ರಿತಾಳ

ಕೀರ್ತಿಯೆ ಹೆಚ್ಚಿನದು ಪಾರ್ಥ । ಅಪಕೀರ್ತಿ ಬಹು ದುಃಖದಾಯಕ ॥ ಪ ॥ ಅಂಜಿಕೆಯಿಂ ನೀ ಕಾಳಗ ಬಿಟ್ಟರೆ । ಅಂಜುಬುರುಕರೆಂತೆಂಬರು ನಿನ್ನ । ಸಂಜನಿಸಿಹಘನ ಘೋರ ರಣದಿ ಧ । ನಂಜಯ ನಿನ್ನನು ನಿಂದಿಪರರಿಗಳು॥೧॥ ಹೇಡಿ ಎಂದೆಣಿಪರು ಮಹಾ ರಥಿಗಳ್ । ಹೇಡಿಯಾಗದಿರು ಸವ್ಯಸಾಚಿಯೇ ॥ ರೂಢಿಯೊಳಗೆ ಲ ಘು ವೆಂ ದೆ ಣಿ ಪ ರು ನಿನ್ನ । ಮಾಡು ಕದನವೆಂಹ ದಾಸಕೇಶವನುತ ॥ ೨ ॥

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬ ॥**

ನಿನ್ನನ್ನು ಕಂಡರೆ ಆಗದವರು ನಿನ್ನ ಕುರಿತು ಅವಾಚ್ಯ ನುಡಿಗಳನ್ನು ಆಡುವರು. ನಿನ್ನ ಸಾಮರ್ಥ್ಯವನ್ನು ಹಳಿಯುವರು. ಅದಕ್ಕಿಂತ ದುಃಖವು ಇನ್ನಾವುದಿದೆ ?

ರಾಗ—ಬೇಹಾಗ್ ತ್ರಿತಾಳ

ಕಂಡರಾಗದವರು ಪಾರ್ಥ । ಕಂಡಕಂಡಂತೆ ನುಡಿಯುವರವರು ॥ ಪ ॥ ಚಂಡ ವಿಕ್ರಮನೆ ಮೂಲ್ಲೋಕಕೆ ನೀ । ಗಂಡನೆ ಸಿ ಕದನವ ಬಿಡುವರೆ ॥ ಕಂಡಂತಾಡುವರ್ ವೈರಿಗಳೆಲ್ಲರು । ಕಂಡು ಸಹಿಸಲಹುವೇ ಯೋಚಿಸು ನೀ ॥ ೧ ॥ ಯಶೋದುಂದುಭಿಯ ವೊಳಗಿದವಗೆ ಅಪ । ಯಶ

ಬಂದರೆ ಅದಕ್ಕಿಂತ ದುಃಖವು । ಯಶೋವಂತಗೆ ಬೇಕಿಹುದೆ ಇದನರಿತು ।
ಯಶಗಳಿಸೆಂದ ದಾಸಕೇಶವನುತ ॥ ೨ ॥

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇಮಹೀಮ್।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

ಯುದ್ಧದಲ್ಲಿ ಸತ್ತರೆ ಸ್ವರ್ಗ ಪಡೆಯುವೆ. ಗೆದ್ದರೆ ಮಹಿಯನ್ನಾಳುವೆ. ಆದ್ದರಿಂದ ಕೌಂತೇಯ ಯುದ್ಧ ಗೈವೆನೆಂದೇ ನಿಶ್ಚಯಿಸಿ ಎದ್ದೇಳು.

ರಾಗ—ಪಟ್ದೀಪ್ ತ್ರಿತಾಳ

ಅಳಿದರೆ ಪಡೆಯುವೆ ವೀರಸ್ವರ್ಗ । ಉಳಿದರೆ ಪಡೆಯುವೆ ರಾಜ್ಯ ಪಟ್ಟವ ॥ ಪ ॥ ಯುದ್ಧದೊಳ್ ಅಳಿದೊಡೆ ಉಳಿದೊಡೆ ಯಶವಿದೆ । ಸಿದ್ಧನಾಗು ನೀ ವೀರಕದನಕೆ ॥ ಎದ್ದು ನಿಲ್ಲು ಕರದೊಳು ಧನುವಪಿಡಿದು । ಯುದ್ಧಗೈವ ನಿಶ್ಚಯದಿಂ ಅರ್ಜುನ ॥ ೧ ॥ ಕರ್ಮಗೈಯದೊಡೆ ನರಕವ ಪಡೆಯುವೆನೀ । ಕರ್ಮವ ಗೈದೊಡೆ ಸ್ವರ್ಗ ಪಡೆಯುವೆ । ಧರ್ಮಯುಕ್ತ ಸ್ವಕರ್ಮ ವಾಚರಿಸು । ನಿರ್ಮಲ ಮನದೊಳಿಂದ ದಾಸಕೇಶವನುತ ॥ ೨ ॥

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾ ಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥**

ಸುಖ ದುಃಖಗಳು ಲಾಭ ನಷ್ಟಗಳು, ಸೋಲು ಗೆಲುವುಗಳು, ಇವುಗಳನ್ನು ಸಮವಾಗಿ ಕಂಡು ಯುದ್ಧಕ್ಕೆ ಅನುವಾಗು. ಆಗ ನಿನಗೆ ಪಾಪವು ಅಂಟುವುದಿಲ್ಲ.

ರಾಗ —ಹಿಂದೋಳ ಆದಿತಾಳ

ದ್ವಂದ್ವಯುಕ್ತ ಜಗವಿದು ನಿಶ್ಚಯವು । ದ್ವಂದ್ವಾತೀತ ಸ್ಥಿತಿ ಸುಖದಾಯಕವು ॥ ಪ ॥ ಸುಖದೊಳು ಹಿಗ್ಗದೆ ದುಃಖದಿ ಕುಗ್ಗದೆ । ಲಾಭದೊಳುಬ್ಬದೆ ನಷ್ಟದೊಳ್ ತಗ್ಗದೆ । ಜಯಾಪಜಯಗಳು ಎನ್ನಧೀನವೆಂದರಿತು

ಕದನಕೊಡು ಕುಂತಿ ಸುಪುತ್ರ ॥ ೧ ॥ ನಾನೇ ಕರ್ತೃವು ಎಂಬ ಗರ್ವದಿಂ। ನೀನು ಕದನಕೊಡೆ ಪಾಪ ತಗುಲುವುದು ॥ ನಾನು ನಿಮಿತ್ತವು ನೀನೆ ಸಮಸ್ತವು ಜ್ಞಾನವಿವನರಿಯೆ ಪಾಪವಿಮುಕ್ತಿಯು ॥ ೨ ॥ ಲೇಸು ಕೆಡುಕುಗಳ ಎನ್ನಡಿಗರ್ಪಿಸಿ । ವಾಸವಾತ್ಮಜನೆ ಕರ್ಮವ ಗೈದು ॥ ದೋಷಿಕೌರವರ ನಾಶಗೈದು ಭವ ಪಾಶಕಳೆ ಎಂದ ದಾಸಕೇಶವನುತ ॥ ೩ ॥

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು।**
**ಬುದ್ಧ್ಯಾಯುಕ್ತೋಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥ ೩೯ ॥**

ನಿನಗೀತನಕ ಹೇಳಿದುದು ಸಾಂಖ್ಯ ಬುದ್ಧಿಯು. ಈಗ ಯೋಗ ಬುದ್ಧಿಯನ್ನು ಹೇಳುವೆನು ಕೇಳು. "ಪಾರ್ಥ ಈ ಬುದ್ಧಿಯಿಂದ ಕೂಡಿದ್ದರೆ ನೀನು ಕರ್ಮದ ಕಟ್ಟನ್ನು ಕಳಚಿಕೊಳ್ಳಬಹುದು.

ರಾಗ—ಮೋಹನ ಆದಿತಾಳ

ಪೇಳಿಹೆ ನಿನಗೆ ನಾ ಸಾಂಖ್ಯ ಬುದ್ಧಿಯ । ಪೇಳುವೆನೀಗ ಕೇಳ್ ಯೋಗ ಬುದ್ಧಿಯಾ ॥ ಪ ॥ ಆತ್ಮಾನಾತ್ಮ ವಿಚಾರವ ಪೇಳ್ದೆನು । ಆತ್ಮ ಅವಧ್ಯವೆಂತೆಂಬುದ ನ ರು ಹಿ ದೆ ॥ ಆತ್ಮಜ್ಞಾನದಿಂ ಕರ್ಮಗೈಯೆಪರ । ಮಾತ್ಮನು ದೊರೆಯುವನೆಂದು ತಿಳಿಸಿದೆ ॥ ೧ ॥ ಸಮಭಾವದಿ ದ್ವಂದ್ವವ ನೋಡುತ ನೀ। ಅಮಿತವಿಕ್ರಮನೆ ಯೋಗ ಬುದ್ಧಿಯೊಳ್ । ನಮಿಸುತೆ ಎನ್ನನು ಕರ್ಮದ ಕಟ್ಟಿಯಿಂ। ಪಾರಾಗಲಹುದೆಂದ ದಾಸಕೇಶವನುತ ॥ ೨ ॥

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥**

ಇಲ್ಲಿ ಯಾವುದನ್ನು ಉಪಕ್ರಮಿಸುವೆವೋ ಅದಕ್ಕೆ ನಾಶವಿಲ್ಲ. ಈ ಕರ್ಮದಿಂದ ಯಾವ ದೋಷವೂ ಇಲ್ಲ. ಇದನ್ನು ಸ್ವಲ್ಪ ಮಾಡಿದರೂ ಮಹಾ ಭಯದಿಂದ ಇದು ರಕ್ಷಣೆ ಮಾಡುವುದು.

ರಾಗ—ಧಾಣಿ ತ್ರಿತಾಳ

ವ್ಯರ್ಥವಾಗದೀ ಕರ್ಮ ಪಾರ್ಥ । ಸಾರ್ಥಕ ಗೈಯುವುದು ಅರಿತಿದ ಗೈದೊಡೆ ॥ ಪ ॥ ಜನ್ಮಜನ್ಮಕೂ ಜೊತೆಯೊಳ್ ಬರುವುದು । ಜನ್ಮ ಉತ್ತಮವ ಕರುಣಿಸಿ ಪೊರೆವುದು ॥ ಮನ್ಮನ ಪ್ರೀತಿಗೆ ಗೈದರಿದನು ಖಿನ್ನ । ಜನ್ಮ ಮರಣದಿಂ ತಪ್ಪಿಸಿ ಪೊರೆವುದು ॥ ೧ ॥ ಫಲಾಪೇಕ್ಷೆಯಿಂ ಗೈದರೆ ದೋಷವು । ಫಲೇಚ್ಛೆ ಇಲ್ಲದೆ ಗೈದರೆ ಮುಕ್ತಿ ॥ ಫಲಾಭಿಲಾಷೆ ಯೆಯಿಲ್ಲದೆ ಗೈದೊಡೆ । ನೆಲೆಯಿದು ಶಾಂತಿಗೆ ದಿವ್ಯ ಮುಕ್ತಿಗೆ ॥ ೨ ॥ ಕರ್ಮ ಯೋಗವನು ಸ್ವಲ್ಪ ಆಚರಿಸೆ । ಧರ್ಮ ರಕ್ಷಿಪುದು ಜನನಮರಣದಿಂ ॥ ಧರ್ಮಯುಕ್ತ ಕರ್ಮವು ಸುಖ ಸಾಧನ । ಮರ್ಮವನರಿ ಎಂದ ದಾಸಕೇಶವನುತ ॥ ೩ ॥

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥೪೧॥**

"ಎಲೈ ಕುರುವಂಶೋತ್ಪನ್ನನೇ, ಇದರಲ್ಲಿ ನಿಶ್ಚಯಾತ್ಮಕ ಬುದ್ಧಿ ಒಂದೇ ಇರುವುದು. ನಿಶ್ಚಯ ಹೀನ ಮನುಷ್ಯರ ಬುದ್ಧಿಯು ಅನಂತ ಅಥವಾ ಬಹು ಶಾಖೆಗಳಿಂದ ಒಡಗೊಂಡಿರುವುದು.

ರಾಗ—ಬಹಾರ್ ತ್ರಿತಾಳ

ಕರ್ಮಯೋಗದೊಳು ಮುಕ್ತಿಯೆ ಗುರಿಯು । ಕರ್ಮಫಲತ್ಯಜಿಸೆ ಮುಕ್ತಿದೊರೆವುದು ॥ ಪ ॥ ನಿಶ್ಚಿತ ಬುದ್ಧಿಯ ಪಡೆದಿಹ ಯೋಗಿಯು । ನಿಶ್ಚಯ ಜ್ಞಾನದಿ ಮುಕ್ತಿ ಪಡೆವನು ॥ ನಿಶ್ಚಯ ರಹಿತ ಬುದ್ಧಿಯ ಮಾನವನಿಗೆ । ನಿಶ್ಚಯ ಜ್ಞಾನವು ದೊರೆಯದಿರುವುದು ॥ ೧ ॥ ಕಾಮ್ಯ ಕರ್ಮದಿಂದ ಪುಣ್ಯ ಸಂಜನಿಸಿ । ಕಾಮನೆ ಪೂರ್ತಿಯಾಗುವುದು ಸ್ವರ್ಗದೊಳು ॥ ಕಾಮ್ಯರಹಿತ ಕರ್ಮವೆ ನಿಜಯೋಗವು । ನಿಷ್ಕಾಮಲೇಸೆಂದ ದಾಸಕೇಶವನುತ ॥ ೨ ॥

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯ ವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨ ॥**

ಅಜ್ಞಾನಿ ಜನರು ವೇದದಲ್ಲಿರುವ ಫಲದಾಯಕ ಕರ್ಮಗಳಲ್ಲೇ ಆಸಕ್ತರಾಗಿ ಸ್ವರ್ಗಫಲವನ್ನು ಮಾತ್ರ ಕೊಡುವ ಕರ್ಮಕಾಂಡಕ್ಕಿಂತ ಹೆಚ್ಚಿನ ದೇನೂ ಇಲ್ಲವೆಂದು ತರ್ಕಿಸುವರು.

ರಾಗ—ಬೇಹಾಗ್ ತ್ರಿತಾಳ

ವೇದವಾದರತರು ಜನರು । ಸಾಧನ ಗೈವರು ಸ್ವರ್ಗದ ಪ್ರಾಪ್ತಿಗೆ ॥ ಪ ॥ ಫಲದಪೇಕ್ಷೆಯಿಂ ಕರ್ಮಗೈವರು ॥ ಫಲಯುಕ್ತ ಕರ್ಮ ಹೆಚ್ಚಿನ ದೆಂಬುದು । ನೆಲೆಯುಅಿಯರು ದಾಸಕೇಶವನುತ ॥ ೧ ॥

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥**

ಅವರು ಕಾಮಾತ್ಮರಾಗಿ ಸ್ವರ್ಗವೇ ಸರ್ವ ಶ್ರೇಷ್ಠವಾದ ಗತಿಯೆಂದು ಭಾವಿಸುವರು. ಕರ್ಮಫಲದಿಂದ ಒದಗುವ ಭೋಗವೇ ಹೆಚ್ಚಿನದೆಂದು ಬಣ್ಣಿಸಿಯು ಮಾತಾಡುವರು. ಕರ್ಮವು ಪುನರ್ಜನ್ಮಕ್ಕೆ ಕಾರಣವಾಗುವುದು. ಅವರು ಸ್ವರ್ಗದ ಭೋಗಗಳನ್ನು ಪಡೆಯಲು ಬೇಕಾದ ಕರ್ಮಗಳನ್ನೇ ಹೊಗಳುವರು.

ರಾಗ—ಸಾರಂಗ ರೂಪಕತಾಳ

ಸಗ್ಗಸುಖದ ಹಂಬಲದಿಂ । ಹಿಗ್ಗಿನಲಿವರಜ್ಞಾನಿಗಳ್ ॥ ಪ ॥ ಕಾಮ್ಯ ಕರ್ಮವಗಳನೆ ಗೈದು । ತಾಮಸ ರಾಜಸದೊಳಿದ್ದು ॥ ಹೇಮ ಧಾಮ ಸುಖವ ಬಯಸಿ । ಕಾಮ್ಯಕರ್ಮ ಹೊಗಳುತಿಹರು ॥ ೧ ॥ ಕರ್ಮಫಲದಿ ಪುನರ್ಜನ್ಮ ಕರ್ಮ ಬಂಧದಿ ಮರಳಿ ಜನ್ಮ । ಕರ್ಮಫಲವ ಬಿಟ್ಟು ನಡೆಯೆ । ಧರ್ಮ ಜ್ಞಾನಮುಕ್ತಿ ಫಲವು ॥ ೨ ॥ ಜನನ ಮರಣ ಸುಳಿಗೆ ಸಿಲುಕಿ । ಹನನ ಗೈಯ ಬೇಡ ಬಾಳ । ನೆನೆದು ದಾಸಕೇಶವನುತ । ನನು ಪಡೆದು ಧನ್ಯನಾಗು ॥ ೩ ॥

**ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತ ಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

ಭೋಗ ಭಾಗ್ಯಗಳಲ್ಲಿಯೇ ಆಸಕ್ತರಾಗಿ ಅದಕ್ಕೆ ಬೆರಗಾಗಿ ಮನ ಸೋತಿರುವವರಿಗೆ ಅಂತಃಕರಣದಲ್ಲಿ ನಿಶ್ಚಯಾತ್ಮಕವಾದ ಬುದ್ಧಿಯು ಉಂಟಾಗಲಾರದು.

ರಾಗ—ಮಾಲಕಂಸ ತ್ರಿತಾಳ

ಭೋಗ ಭಾಗ್ಯರತರು । ಜನರು ।। ಆಗಮದರ್ಥವ ತಿಳಿಯದೆ ನಡೆವರು ॥ ಪ ॥ ಸಗ್ಗ ಸುಖದ ಹಂಬಲದಿ ಆಸಕ್ತರು । ಹಿಗ್ಗುವರವರು ಐಹಿಕ ಸುಖಕೆ ॥ ಕುಗ್ಗುವರವರು ಸಂಕಟಕಾಲದಿ । ಹಿಗ್ಗುವರ್ ಸುಖದ ಗಳಿಗೆಗಳು ಬರಲು ॥ ೧ ॥ ಚಂಚಲ ಮನದೀ ಜನರು ಸತತ ಬಹು । ಕೊಂಚ ಸುಖಕೆ ಆಶಿಸುತಲಿರುವರು ॥ ವಂಚಿಪರವರದಿಪು ನಿಶ್ಚಿತ ಬುದ್ಧಿಲಿ । ಸಂಚರಿಸುವರು ಸುಖ ದುಃಖದ ಪಥದೊಳ್ ॥ ೨ ॥ ಬುದ್ಧಿ ನಿಶ್ಚಯದಿ ಜ್ಞಾನ ದೊರೆಯುವುದು । ಸಿದ್ಧಿಪುದಾನಂದ ಮುಕ್ತಿಯ ಸುಖವು ॥ ಉದ್ಧವಾಗದಲೆ ಸಿದ್ಧನಾಗಿ ನೀ । ಯುದ್ಧಗೈಯೆಂದ ದಾಸಕೇಶವನುತ ॥ ೩ ॥

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ ೪೫ ॥**

ಎಲೈ ಪಾರ್ಥ, ವೇದದ ಕರ್ಮಕಾಂಡವು ಸತ್ತ್ವರಜಸ್ತಮಗಳೆಂಬ ತ್ರಿಗುಣಗಳ ವಿಚಾರವನ್ನೇ ವಿವರಿಸುವುವು. ನೀನು ಇವುಗಳನ್ನು ಮೀರುವವನಾಗು. ಯಾವಾಗಲೂ ಶುದ್ಧ ಸತ್ತ್ವದಲ್ಲಿಯೇ ಇರು. ವಸ್ತುಗಳನ್ನು ಪಡೆದು ಕಾಪಾಡಿಕೊಳ್ಳುವ ಹಂಬಲಕ್ಕೆ ಸಿಲುಕಬೇಡ ಎಚ್ಚರಿಕೆಯಿಂದ ಇರು.

ರಾಗ-ಭೀಮ್‌ಫಲಾಸ್ ತ್ರಿತಾಳ

ರಜತಮ ಸತ್ತ್ವದ ವಿವರಣೆ ನೀಡುತ । ದ್ವಿಜರು ಕರ್ಮಕಾಂಡವ ಹೊಗಳುವರು ॥ ಪ ॥ ಸತ್ತ್ವ ಮುಕ್ತಿಯ ಪಥ ತೋರುವುದು । ರಜೊಗುಣವು ಬಂಧದಿ ಕೆಡಹುವುದು ॥ ತಮೋಗುಣವು ನರಕಕ್ಕೆ ತಳ್ಳುವುದು ।

ತ್ರಿಗುಣಾತೀತ ಸ್ಥಿತಿಪಡೆಯೋ ನೀ ಪಾರ್ಥ ॥ ೧ ॥ ಶುದ್ಧ ಸತ್ತ್ವದೊಳಗಿರ ಲೆತ್ನಿಸು ನೀ । ಬದ್ಧನಾಗದಿರು ಆಶೆ ಬಯಕೆಯಿಂ ॥ ಗೆದ್ದು ದ್ವಂದ್ವಗಳ ಎದ್ದು ನಿಂತು ನೀ । ಯುದ್ಧಗೈಯೆಂದ ದಾಸಕೇಶವನುತ ॥ ೨ ॥

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್‌ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

ಸಣ್ಣ ಸಣ್ಣ ಜಲಾಶಯಗಳಲ್ಲಿ ಆಗುವ ಪ್ರಯೋಜನವು ಎಲ್ಲೆಲ್ಲೂ ನೀರಿರುವ ಮಹಾ ಸರೋವರದಲ್ಲಿಯೂ ಅಡಕವಾಗಿರುವುದಲ್ಲವೇ ? ಅಂತೆಯೇ ವೇದದ ಕರ್ಮಕಾಂಡದಲ್ಲಿರುವ ಫಲವೆಲ್ಲವೂ ತತ್ತ್ವವನ್ನರಿತ ಬ್ರಹ್ಮಜ್ಞಾನಿಗೆ ದೊರೆತೇ ದೊರೆಯುವುದು

ರಾಗ–ದುರ್ಗಾ ತ್ರಿತಾಳ

ಕರ್ಮಕಾಂಡ ಫಲವೂ ಪಾರ್ಥ । ಬ್ರಹ್ಮಜ್ಞಾನಿಗದು ಬಯಸದೆ ದೊರೆವುದು ॥ ಪ ॥ ನಿರ್ಮಲಚಿತ್ತದಿ ಫಲವ ಬಯಸದಲೆ ಕರ್ಮಗೈಯ್ಯುವನು ಬ್ರಹ್ಮಜ್ಞಾನಿಯು ॥ ಕರ್ಮ ಫಲವ ಬಯಸುತೆ ಅಜ್ಞಾನಿಯು । ಕರ್ಮ ಗೈಯುವನು ಕರ್ಮಭೂಮಿಯೊಳ್ ॥ ೧ ॥

ಪುಟ್ಟಜಲಾಶಯದೊಳು ದೊರೆಯುವ ಜಲ । ದೊಡ್ಡ ಜಲಾಶಯ ದೊಳು ದೊರೆವಂತೆ ॥ ಕರ್ಮಕಾಂಡ ಫಲ ಜ್ಞಾನಿಗು ದೊರೆವುದು ॥ ಮರ್ಮವರಿಯೆಂದ ದಾಸಕೇಶವನುತ ॥ ೨ ॥

**ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕ ದಾಚನ ।**
**ಮಾ ಕರ್ಮಫಲಹೇತು ರ್ಭೂ–ರ್ಮಾತೇ ಸಂಗೋಽಸ್ತ್ವಕರ್ಮಣಿ ॥ ೪೭ ॥**

ನಿನಗೆ ಕರ್ಮದಲ್ಲಿಯೇ ಅಧಿಕಾರವು, ಕರ್ಮಫಲಗಳಲ್ಲಿ ಅಧಿಕಾರವು ಬೇಡ ; ಕರ್ಮದ ಫಲವು ಹುಟ್ಟುವುದಕ್ಕೆ ಕಾರಣನಾಗಬೇಡ, ಕರ್ಮವನ್ನು ಮಾಡದೆ ಇರುವುದರಲ್ಲಿಯೂ ನಿನಗೆ ಆಸಕ್ತಿಯುಂಟಾಗದೆ ಇರಲಿ.

ರಾಗ-ಹಿ. ಕಾಫಿ ತ್ರಿತಾಳ

ಕರ್ಮ ಮಾತ್ರದೊಳಗೆ ಅಧಿಕಾರವು । ಕರ್ಮಫಲದೊಳಧಿಕಾರ ವದಿಲ್ಲವು ॥ ಪಲ್ಲ ॥ ಫಲವದು ದೈವಾಧೀನವೆಂದರಿತು । ಛಲದಿ ಕಾದಾಡು ಶತ್ರುಗಳೊಡನೆ ॥ ನೆಲೆಯುನರಿತು ನೀ ಕದನ ಗೈದು ಈ । ನೆಲನನಾಳು ಧರ್ಮವ ನಾಚರಿಸುತೆ ॥ ೧ ॥ ಕರ್ಮಗೈಯ್ಯದಿರಬೇಡಲೊ ಪಾರ್ಥನೆ । ಧರ್ಮಯುಕ್ತ ಸತ್ಕರ್ಮವ ನಡೆಸು ॥ ಕರ್ಮ ಫಲವ ಬಯಸದೆ ಕದನವ ಕೊಡೆ । ಧರ್ಮವಹುದೆಂದ ದಾಸಕೇಶವನುತ ॥ ೨ ॥

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ॥**
**॥ ೪೮॥**

ಎಲೈ ಧನಂಜಯನೇ, ಯೋಗದಲ್ಲಿದ್ದುಕೊಂಡು ಸಂಗವನ್ನು ಬಿಟ್ಟು ಸಿದ್ಧಿಯಾಗಲಿ ಆಗದಿರಲಿ ಎರಡರಲ್ಲೂ ಸಮನಾಗಿದ್ದುಕೊಂಡು ಕರ್ಮಗಳನ್ನು ಮಾಡು. ಸಮತ್ವವೇ ಯೋಗ.

ರಾಗ-ಮಾಲಕಂಸ ತ್ರಿತಾಳ

ಯೋಗ ಪಥದೊಳಿರು ನೀ । ಧನಂಜಯ । ಆಗುಹೋಗುಗಳೊಳ್ ಸಮತೆಯಿಂದಿರುತ ॥ ಪ ॥ ಫಲಾಪೇಕ್ಷೆ ಇಲ್ಲದೆ ನೀ ಧರ್ಮದ । ನೆಲೆಯನರಿತು ಸಂಗ್ರಾಮದಿ ನಿಂತು ॥ ಛಲವಬಿಡದೆ ಅಧರ್ಮ ಸಾಧಿಪ ಕುರು । ಕುಲ ಕಲಂಕಿಗಳ ನಾಶವ ಗೈಯುತೆ ॥ ೧ ॥ ಸಿದ್ಧಿಯಾಗಲಿ ಸಾಧಿಸುವ ಕಾರ್ಯದೊಳ್ । ಸಿದ್ಧಿಸದಿರಲಿ ಫಲಂಗಳು ಅದರೊಳ್ ॥ ಬುದ್ಧಿಯಿಂದರಿಯುತೆ ಸಮತೆಯೇ ಯೋಗವೆಂದು। ಯುದ್ಧ ಗೈಯೆಂದ ದಾಸಕೇಶವನುತ ॥ ೨ ॥

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ॥**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

ಅರ್ಜುನಾ, ಬುದ್ಧಿಯೊಡಗೂಡಿದ ಕರ್ಮಕ್ಕಿಂತಲೂ ಬರಿಯ ಕರ್ಮವು ಕೀಳಾದುದು. ಬುದ್ಧಿಯಲ್ಲಿಯೇ ನೆಲೆಯನ್ನು ಕಂಡುಕೊ ಫಲಕ್ಕಾಗಿ ಕರ್ಮ ಮಾಡುವವರು ಹೀನರು.

ರಾಗ—ಹಿ. ಕಾಫಿ ತ್ರಿತಾಳ

ಬುದ್ಧಿಹೀನ ಕರ್ಮವು ಬಹುಹೀನ । ಬುದ್ಧಿಯುಕ್ತ ಕರ್ಮವದು ಪಾವನ ॥ ಪ ॥ ಯೋಗ ಬುದ್ಧಿಯಿಂ ಗೈದಿಹ ಕರ್ಮವು । ಯೋಗವೆನಿಸುವುದು ಶ್ರೇಷ್ಟವು ಪಾರ್ಥ ॥ ಶೀಘ್ರಫಲದ ಅಭಿಲಾಷೆಯಿಂ ಗೈದಿಹ ಯೋಗರಹಿತ ಕರ್ಮವು ಅದು ವ್ಯರ್ಥ ॥ ೧ ॥ ಬುದ್ಧಿಯೊಳಾಶ್ರಯ ಪಡೆಯುತೆ ನೀ ಯೋಗ । ಸಿದ್ಧಿಕೈಕೊಳ್ಳುತ ಕರ್ಮವ ಗೈಯೈ ॥ ಬದ್ಧನಾಗದೆಲೆ ಫಲಗಳಿಂಗೆ ನೀ ಯುದ್ಧಗೈಯೆಂದ ದಾಸಕೇಶವನುತ ॥ ೨ ॥

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ॥**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್**
**॥೫೦॥**

ಈ ಲೋಕದಲ್ಲಿ ಬುದ್ಧಿಯಿಂದೊಡಗೂಡಿದವನು ಪುಣ್ಯ ಪಾಪಗಳೆರಡನ್ನೂ ಬಿಡಿಸಿಕೊಳ್ಳುತ್ತಾನೆ. ಆದ್ದರಿಂದ ಯೋಗಕ್ಕೆ ಸನ್ನದ್ಧನಾಗು. ಯೋಗವೇ ಕರ್ಮಗಳಲ್ಲಿರುವ ಜಾಣತನವು.

ರಾಗ—ಜೀವನಪುರಿ ತ್ರಿತಾಳ

ಪಾಪಪುಣ್ಯಗಳ ಕರ್ಮವ ತಪ್ಪಿಸೆ । ಕರ್ಮ ಗೈಯುವುದು ನಿಸ್ವಾರ್ಥತೆಯಿಂ ॥ ಪ ॥ ಬುದ್ಧಿಯುಕ್ತ ಕರ್ಮವನದ ಗೈದೊಡೆ । ಬದ್ಧನಾಗದುಳಿಯುವೆ ಬಂಧನದಿಂ ॥ ಯುದ್ಧ ಕರ್ಮ ಕರ್ತವ್ಯವೆಂದು ಸ । ನ್ನದ್ಧನಾಗು ನೀ ಕರ್ಮವ ಗೈಯುತ ॥ ೧ ॥ ಯೋಗವೇ ಕರ್ಮದ ಕೌಶಲಭೋಗದ। ತ್ಯಾಗವೇ ಯೋಗದ ಗುಟ್ಟೆದನರಿತು ॥ ಆಗುಹೋಗುಗಳ ಎನ್ನಡಿಗರ್ಪಿಸಿ। ಯೋಗ ಪಡೆಯೆಂದ ದಾಸಕೇಶವನುತ ॥ ೨ ॥

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥**

ಏಕೆಂದರೆ ಬುದ್ಧಿಯಿಂದೊಡಗೂಡಿದ ಜಾಣರು ಕರ್ಮದಿಂದುಂಟಾಗುವ ಫಲವನ್ನು ಬಿಟ್ಟು : ಹುಟ್ಟಿನ ಕಟ್ಟಿನಿಂದ ಬಿಡುಗಡೆಯನ್ನು ಹೊಂದಿ, ಯಾವ ದೋಷವೂ ಇಲ್ಲದ ಸ್ಥಾನವನ್ನು ಪಡೆದುಕೊಳ್ಳುವರು.

ರಾಗ–ತಿಲಂಗ ತ್ರಿತಾಳ

ಕರ್ಮಫಲವ ತ್ಯಜಿಸು ಧನಂಜಯ । ಧರ್ಮದ ಮರ್ಮವರಿತು ಕದನ ನಡೆಸು ॥ ಪ ॥ ಜಾಣರು ಕರ್ಮಕೆ ಬದ್ಧರಾಗದಲೆ । ಕಾಣರು ಸುಖ ದುಃಖವನು ಕರ್ಮದೊಳ್ ॥ ಕಾಣುತೆ ಯೋಗದ ದೃಷ್ಟಿಯಿಂದ ಫಲ। ಮಾಣಿಸುವರು ನಿಜ ಜ್ಞಾನದೊಳೆಲ್ಲವ ॥ ೧ ॥ ದೋಷರಹಿತ ಕರ್ಮವ ನಡೆಸುತ ನೀ । ಲೇಸ ಸಂಪಾದಿಸು ಇಹಪರದೊಳಗೆ ॥ ಈಶ ನಾ ಎನ್ನ ಆಜ್ಞೆ ನಡೆಸಿ ಭವ । ಈಸಿ ಸುಖಿಸೆಂದ ದಾಸಕೇಶವನುತ ॥ ೨ ॥

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

ಯಾವಾಗ ನಿನ್ನ ಬುದ್ಧಿಯು ಮೋಹದ ಕಲ್ಮಷವನ್ನು ಮೀರುವುದೋ ಆಗ ಮುಂದೆ ಕೇಳಬೇಕೆಂಬುದರಲ್ಲಿಯೂ ಹಿಂದೆ ಕೇಳಿದ್ದರಲ್ಲಿಯೂ ಆದರವಿಲ್ಲದವನಾಗುತ್ತೀಯೇ.

ರಾಗ—ಹಿಂ ಕಾಫಿ ತ್ರಿತಾಳ

ಮೋಹದ ಕಲ್ಮಷ ಮೀರು । ಬುದ್ಧಿಯೊಳ್ । ವ್ಯಾಮೋಹವನೀ ಮೀರು ॥ ಪ ॥ ನಿಜಜ್ಞಾನವು ತಾ ದೊರೆ ಕೊಂಡಾಕ್ಷಣ। ನಿಜಪಥ ಇದಿರ್ಗಡೆ ತೋರುವುದಾಗ ॥ ಅಜ ಅಮರವು ನಿತ್ಯಾತ್ಮವಿದೆಂದು ನೀ । ನಿಜಸ್ಥಿತಿಯರಿಯಲು ಶಾಂತಿಯ ಪಡೆವೆ ॥ ೧ ॥ ಹಿಂದೆ ಶ್ರವಣಿಸಿದ ಮುಂದೆ ಶ್ರವಣಿಸುವ । ಸಂದೇಹದ ನುಡಿ ಒಪ್ಪದೆ ಮನಕೆ ॥ ಒಂದೇ ಮನದಿಂ ಎನ್ನಡಿ ಭಜಿಸುತೆ । ಆನಂದ ಪಡೆಯೆಂದ ದಾಸಕೇಶವನುತ ॥ ೨ ॥

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿ ಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

ಶ್ರುತಿಗಳನ್ನು ಕೇಳಿ ಹೊಯ್ದಾಡುತ್ತಿರುವ ನಿನ್ನ ಬುದ್ಧಿಯು ಯಾವಾಗ ಆತ್ಮನಲ್ಲಿಯೇ ಅಲುಗಾಡದೆ ನೆಲೆ ನಿಂತುಕೊಳ್ಳುವುದೋ ಆಗ ನೀನು ಯೋಗವನ್ನು ಪಡೆದಂತಾಗುವುದು.

ರಾಗ—ಖರಹರಪ್ರಿಯ ಆದಿತಾಳ

ಶ್ರುತಿವಚನವ ಕೇಳಿ ಮತಿಯದೊ ಅನೇಕಾರ್ಥವನು ಹೇಳೆ ॥ ಅತಿಚಂಚಲ ಸ್ಥಿತಿ ಪಡೆವುದು ನಿಶ್ಚಯ । ರತನಾಗಾತ್ಮದೊಳ್ ವ್ಯಥೆಯ ಕಳೆಯುತ ॥ ೧ ॥ ಬುದ್ಧಿಯು ಆತ್ಮದೊಳ್ ನೆಲೆನಿಲ್ಲಲು ಸಿ। ಸಿದ್ಧನಾಗಿ ಯೋಗವನು ಪಡೆಯುವೆ ॥ ಬುದ್ಧಿಯೋಗದಿಂ ಕರ್ಮವ ನಡೆಸುತೆ । ಬದ್ಧನಾಗದಿರೆಂದ ದಾಸಕೇಶವನುತ ॥ ೨ ॥

ಅರ್ಜುನ ಉವಾಚ

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತಕಿಮ್ ॥ ೫೪ ॥**

ಎಲೈ ಕೇಶವನೆ, ಆತ್ಮನಲ್ಲಿ ನೆಲೆನಿಂತ ಸ್ಥಿತ ಪ್ರಜ್ಞನ ವಿಷಯದಲ್ಲಿ ಇತರರು ಏನೆಂದು ನುಡಿವರು ? ಆ ಸ್ಥಿತಪ್ರಜ್ಞನು ಹೇಗೆ ನುಡಿಯುವನು ಹೇಗೆ ಕುಳ್ಳಿರುವನು ಹೇಗೆ ನಡೆಯುವನು ?

ರಾಗ - ಥಾಣೆ ತ್ರಿತಾಳ

ಕೇಶವಾ ಸ್ಥಿತ ಪ್ರಜ್ಞನೆಂತಿರುವ । ಏನೆಂದು ನುಡಿವರು ಆತನ ವಿಷಯದೊಳ್ ॥ ಪ ॥ ಸ್ಥಿತ ಪ್ರಜ್ಞನು ತಾನೆಂತು ನುಡಿಯುವನು । ಸ್ಥಿತಪ್ರಜ್ಞನ ನಡೆ ಎಂತು ಜಗದೊಳು ॥ ಕ್ಷಿತಿಯೊಳು ವ್ಯವಹರಿಸುವನೆಂತು ಮಾತೆಂತು । ಸ್ಥಿತ ಪ್ರಜ್ಞನೆಂತು ಕುಳ್ಳಿರುವನು ಹರಿಯೆ ॥ ೧ ॥ ಆಶೆಯನೆಂತವ ಗೆದ್ದಿಹ ಆಶೆಯ । ನಾಶವದೆಂತು ಗೈದಿಹ ಕೇಶವನೆ । ವಾಸನಾಕ್ಷಯವೆಂತು ಶ್ರೀಹರಿ । ದಾಸ ಕೇಶವನುತ ಪೇಳೆಂದ ಪಾರ್ಥ ॥ ೨ ॥

ಶ್ರೀ ಭಗವಾನುವಾಚ :—

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

ಎಲೈ ಪಾರ್ಥನೆ, ಮನಸ್ಸಿನಲ್ಲಿರುವ ಕಾಮನೆಗಳನ್ನೆಲ್ಲ ತೊರೆದು ತನ್ನಲ್ಲಿಯೇ, ತನ್ನಿಂದಲೇ ಯಾವಾಗ ತೃಪ್ತನಾಗಿರುವನೋ ಆಗ ಸ್ಥಿತ ಪ್ರಜ್ಞನೆನಿಸುವನು.

ರಾಗ-ಭೀಮ್‌ಪಲಾಸ್ ತ್ರಿತಾಳ.

ಮನದ ಕಾಮನೆಗಳ ತೊರೆಯೋ ಪಾರ್ಥ । ಘನ ಮಹಿಮನ ಪದ ಚಿಂತಿಸು ಸತತ ॥ ಪ ॥ ಆತ್ಮ ಶಾಶ್ವತವು ವೇಹ ಅಶಾಶ್ವತ । ಆತ್ಮಾನಂದವೆ ಬ್ರಹ್ಮಾನಂದ ॥ ಆತ್ಮಾನಾತ್ಮ ವಿಚಾರದಿ ನೀ ಪರ । ಮಾತ್ಮತತ್ವವನು ತಿಳಿಯೊ ಕೃತಾರ್ಥ ॥ ೧ ॥ ಕಾಮನೆಗಳೆಲ್ಲವ ವರ್ಜಿಸಿ ಆತ್ಮಾ । ರಾಮನಾಗುತಲಿ ಸಂತಸಪಡುತ ॥ ಈ ಮಹಿಯೊಳು ಸುಖಿಯವನೆ ಸ್ಥಿತಪ್ರಜ್ಞ । ನೇಮದಿ ಎಂದ ದಾಸಕೇಶವನುತ ॥ ೨ ॥

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತ ಧೀರ್ಮುನಿರುಚ್ಯತೇ ॥ ೫೬ ॥**

ದುಃಖಗಳಿಂದ ಮನಸ್ಸಿನಲ್ಲಿ ತಳಮಳವಾಗದೆ ಸುಖಗಳಲ್ಲಿಹಂಬಲಿಕೆಯಿಲ್ಲದೆ, ಬಯಕೆ, ಹೆದರಿಕೆ, ಸಿಟ್ಟು - ಎಂಬುವುಗಳೆಲ್ಲ ಕಳೆದಿರುವ ಮುನಿಯು ಸ್ಥಿತ ಪ್ರಜ್ಞನೆನಿಸಿರುವನು.

ರಾಗ - ಮಾಲಕಂಸ ತ್ರಿತಾಳ.

ದುಃಖದೊಳ್ ಕುಗ್ಗದೆ ಸುಖದೊಳ್ ಹಿಗ್ಗದೆ । ಸುಖ ದುಃಖಗಳ ಮೀರಿಹ ಸ್ಥಿತಪ್ರಜ್ಞ ॥ ಪ ॥ ಕೋಪ ಬಯಕೆ ಭಯ ತ್ಯಜಿಸಿರುವಾತನೆ ।

ಪಾಪ ಪುಣ್ಯಗಳ ಮೀರಿರುವವನೇ ॥ ತಾಪತ್ರಯಗಳ ಹಿಂಗಿಸಿ ಈ ಭವ ॥ ಕೂಪದಿಂ ಪಾರಾದವನೇ ಸ್ಥಿತಪ್ರಜ್ಞ ॥ ೧ ॥ ಮನದೊಳು ತಳಮಳವಿಲ್ಲದ ಧೀರನೆ । ಅನವರತವು ತನ್ನಾತ್ಮದೊಳ್ ರತನೆ ॥ ಸನುಮತದೊಳು ಹರಿ ದಾಸಕೇಶವನುತ । ನನು ಅನುದಿನ ನೆನೆಯುವನೆ ಸ್ಥಿತಪ್ರಜ್ಞ ॥ ೨ ॥

**ಯಃ ಸರ್ವತ್ರಾನಭಿಸ್ನೇಹ ಸ್ತತ್ತತ್ ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

ಯಾವದೊಂದರಲ್ಲಿಯೂ ಮನಸ್ಸನ್ನಂಟಿಸಿಕೊಳ್ಳದೆ ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಆಯಾ ಕಾಲಕ್ಕೆ ಬಂದದ್ದನ್ನು ಮೆಚ್ಚದೆಯೂ ಹಗೆ ಮಾಡ ದೆಯೂ ಅವನ ಪ್ರಜ್ಞೆಯು ನೆಲೆ ನಿಂತಿರುವದು.

ರಾಗ - ಜೀವನಪುರಿ ತ್ರಿತಾಳ

ಶುಭಾಶುಭದ ಫಲ ಲೆಕ್ಕಿಸದಿರುವನ । ಪ್ರಜ್ಞೆಯು ದೇವನೊಳಾ ನೆಲೆ ನಿಂತಿಹುದು ॥ ಪ ॥ ಸ್ನೇಹ ದ್ವೇಷಗಳ ಮೀರಿರುವಾತನೆ । ಬಾಹ ದುಃಖ ಸುಖಗಳ ಗೆದ್ದವನೆ ॥ ಆಯಾ ಕಾಲಕೆ ಬಂದುದ ಸಹಿಸುತ । ಸ್ನೇಹ ದ್ವೇಷ ಗಳ ಗೆದ್ದವ ಸ್ಥಿತಪ್ರಜ್ಞ ॥ ೧ ॥ ಮೆಚ್ಚದೆ ಸುಂದರ ವಸ್ತುಗಳಿಗೆ ತಾ । ನೆಚ್ಚದೆ ಐಹಿಕ ದೈಹಿಕ ಸೊಗಕೆ । ಸಚ್ಚಿದಾನಂದ ದಾಸಕೇಶವನುತ । ನಿಚ್ಚಯಂತೆ ನಡೆವವ ಸ್ಥಿತಪ್ರಜ್ಞ ॥ ೨ ॥

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

ಆಮೆಯು ಎಲ್ಲಾ ಕಡೆಗಳಿಂದಲೂ ತನ್ನ ಅವಯವಗಳನ್ನು ಒಳಕ್ಕೆ ಕೆದುಕೊಳ್ಳುವಂತೆ ಯಾವಾಗ ಇವನು ಇಂದ್ರಿಯಗಳನ್ನು ಇಂದ್ರಿಯಗಳ ವಿಷಯಗಳಿಂದ ಹಿಂಜಗ್ಗಬಲ್ಲವನಾಗಿರುವನೋ, ಆಗ ಅವನ ಪ್ರಜ್ಞೆಯು ನೆಲೆನಿಂತಿರುವದು.

ರಾಗ - ಹಿಂದೋಳ ಆದಿತಾಳ

ವಿಮುಖವಾಗಿಸು ಇಂದ್ರಿಯಗಳ ವಿಷಯದಿಂ । ಅಮಿತ ಮಹಿಮನೆ ನೃಹರಿಯ ಕೊಂಡಾಡುತ ॥ ಪ ॥

ಇಂದ್ರಿಯುಗಳ ಸುಖದಿಂದ ಹಿಮ್ಮೆಟ್ಟಿಸಿ । ಇಂದ್ರಿಯಗಳ ಕೂರ್ಮ ಸೆಳೆದುಕೊಳ್ಳುವಂತೆ ॥ ಇಂದ್ರಿಯಾತೀತ ಸ್ಥಿತಿಗಡರಿದ । ಮನುಚಂದ್ರನ ಪ್ರಜ್ಞೆಯು ನೆಲೆಸಿಂತಿಹುದು ॥ ೧ ॥ ದ್ವೇಷ ಸ್ನೇಹಗಳ ಮೀರುತೆ ಸತತವು। ಆಶಿಸಿ ಮುಕ್ತಿಯ ದ್ವಂದ್ವವ ಮೀರಿ ॥ ವಾಸನಾಕ್ಷಯವ ಗೈಸುತೆ ಭವವನು। ಈಸಿ ಸುಖಿಸೆಂದ ದಾಸಕೇಶವನುತ ॥ ೨ ॥

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

ವಿಷಯುಗಳನ್ನು ಸೇವಿಸದ ಪ್ರಾಣಿಗೆ ವಿಷಯಗಳೇನೋ ಹಿಮ್ಮೆಟ್ಟುತ್ತವೆ ಆದರೆ ಅವುಗಳಲ್ಲಿರುವ ಇಚ್ಛೆಯ ವಾಸನೆಯು ಪರಮಾತ್ಮನನ್ನು ಕಂಡು ಕೊಂಡಮೇಲೆ ಹೋಗಿಬಿಡುವುದು.

ರಾಗ—ಜೀವನಪುರಿ ತ್ರಿತಾಳ

ಸೇವಿಸದಿರೆ ವಿಷಯಗಳ್ ಹಿಮ್ಮೆಟ್ಟುವುವು । ಭಾವದಿ ವಿಷಯ ಸುಖೇಚ್ಛೆ ಇರುವುದು ॥ ಪ ॥ ಇಚ್ಛಿಸುತಿರೆ ಮನ ತುಚ್ಛವಿಷಯಗಳ ।ನೆಚ್ಚದೆ ಅವುಗಳ ತ್ಯಜಿಸುವ ಮನದಿಂ ॥ ಅಚ್ಯುತನಾಮವ ಭಜಿಸಿ ಅವನ ಘನ । ಮೆಚ್ಚುಗೆ ಪಡೆಯಲಿಚ್ಛಿಸುತಿರು ಅರ್ಜುನ ॥ ೧ ॥ ವಾಸನಾಕ್ಷ ಗೈಸಲು ಭಾಸುರ ವೇಷನಾದೆನ್ನೊಳ್ ಮನವನು ನಿಲಿಸು ॥ ನಾಶರಹಿತ ಸುಖ ಕರುಣಿಸಿ ಪೊರೆವೆನು । ಭಾಷೆ ಈವನೆಂದ ದಾಸಕೇಶವನುತ ॥ ೨ ॥

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥**

ಎಲೈ, ಕೌಂತೇಯನೇ, ವಿವೇಕಿಯಾದ ಪುರುಷನು ಇಂದ್ರಿಯಗಳನ್ನು ಬಿಗಿಹಿಡಿಯುವುದಕ್ಕೆ ಯತ್ನವನ್ನು ಮಾಡುತ್ತಿದ್ದರೂ ಇಂದ್ರಿಯಗಳು ಮನಸ್ಸನ್ನು ಕಡೆಗು ಹಾಕಿ ಬಲತ್ಕಾರದಿಂದ ಹೊರಕ್ಕೆ ಹಾರಿಸಿಕೊಂಡು ಹೋಗುತ್ತವೆ.

ರಾಗ—ಜೈಜೈವಂತ ತ್ರಿತಾಳ

ತುಂಟ ಕುದುರೆಗಳು ಇಂದ್ರಿಯಂಗಳು । ಸುಂಟರಗಾಳಿಯಂದದಿ ಮನಹಾರಿಪ ॥ ಪ ॥ ಬಿಗಿಹಿಡಿಯಲು ಇಂದ್ರಿಯಗಳ ಯತ್ನಿಸಿ । ಹಗರಣದಿಂದ್ರಿಯ ಜೈಸಲಾರವೆ ॥ ಜಗದೊಳು ದುಃಖವ ಸಹಿಸುತೆ ಪುರುಷನು । ಅಗಣಿತ ಕ್ಲೇಶವನನುಭವಿಸುವನು ॥ ೧ ॥ ಮನವ ವಶಪಡಿಸಿ ಇಂದ್ರಿಯಗಳು। ಈ ಕನಸಿನ ಸುಖವನು ಬಯಸಲಿಚ್ಛಿಸಿ ॥ ಹನನಗೈಸಿ ಜೀವನವ ಕೆಡಿಸಿ । ಜನ್ಮವಿಫಲ ಗೈಸುವುದೆಂದ ದಾಸಕೇಶವನುತ ॥ ೨ ॥

**ತಾನಿ ಸರ್ವಾಣಿ ಸಂಯಮ್ಯ । ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ಯೋಗಬಲದಿಂದ ನನ್ನಲ್ಲಿಯೇ ತತ್ಪರನಾಗಿರಬೇಕು. ಹೀಗೆಯೇ ಯಾವನಿಗೆ ಇಂದ್ರಿಯಗಳು ಹಿಡಿತದಲ್ಲಿರುವವೋ ಅವನ ಪ್ರಜ್ಞೆಯು ನೆಲೆನಿಂತಿರುವುದು.

ರಾಗ - ಹಿಂ. ಭೈರವಿ ತ್ರಿತಾಳ

ನನ್ನೊಳು ತತ್ಪರನಾಗು ಪಾರ್ಥ । ನಿನ್ನ ಮನವನೀನನ್ನೊಳು ನಿಲಿಸು ॥ ಪ ॥ ಯೋಗವ ಸಾಧಿಸು ಭೋಗವ ತ್ಯಜಿಸು । ತ್ಯಾಗಗೈದು ಕರ್ಮಫಲಗಳ ಭಜಿಸು ॥ ರಾಗದ್ವೇಷಗಳನೆಲ್ಲವ ವರ್ಜಿಸಿ । ಯೋಗಿಯಾಗಿ ನಿಜ ಸುಖವನನುಭವಿಸು ॥ ೧ ॥ ಮನವಿಂದ್ರಿಯಗಳ ನಿಗ್ರಹಿಸಿದವನ । ಅನವರತವು ಎನ್ನಡಿ ಭಜಿಸುವನ ॥ ಮನವನ್ನೊಳು ನಿಲಿಸಿದವನ ಪ್ರಜ್ಞೆಯದು । ನೆಲೆನಿಂತಿಹುದೆಂದ ದಾಸ ಕೇಶವನುತ ॥ ೨ ॥

ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ಸಂಜಾಯತೇಕಾಮಃ ಕಾಮಾತ್ಕ್ರೋಧೋಽಭಿಜಾಯತೇ
॥ ೬೨ ॥

ವಿಷಯಗಳನ್ನು ಕುರಿತು ಯೋಚಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಸಂಗವುಂಟಾಗುತ್ತದೆ. ಆ ಆಸಕ್ತಿಯಿಂದ ಬಯಕೆಯುಂಟಾಗುತ್ತದೆ. ಆ ಬಯಕೆಯಿಂದ ಸಿಟ್ಟು ಉಂಟಾಗುತ್ತದೆ.

ರಾಗ - ತಿಲಂಗ ತ್ರಿತಾಳ

ವಿಷಯ ಚಿಂತನೆಯೆ ಮೂಲ । ದುಃಖಕೆ । ವಿಷವದು ಸುಖ ಶಾಂತಿಯ ಜೀವನಕೆ ॥ ಪ ॥ ಸಂಗಪಾಶಿಯುಂಟಾಗ್ವುದು ವಿಷಯದ । ಸಂಗ ಉಂಟಾಗುವುದು ಬಯಕೆಯು ॥ ಭಂಗಗೊಳಿಪುದನು ಸಚ್ಚಿಂತನೆಯಂ । ಹಿಂಗಿಪುದೆ ಮ್ಮನ ಮುಕ್ತಿಯ ಸುಖದಿಂ ॥ ೧ ॥ ಇಚ್ಛೆಪೂರ್ತಿಯಾಗದಿರೆ ಕೋಪವದು । ಎಚ್ಚೆತ್ತಿಮ್ಮನು ಹುಚ್ಚರಾಗಿಸಿ ॥ ಸಚ್ಚಾರಿತ್ರ್ಯವ ಕೆಡಿಪುದು ಪ್ರಾರ್ಥನೆ। ಎಚ್ಚರವೆಂದನು ದಾಸಕೇಶವನುತ ॥ ೨ ॥

ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩ ॥

ಕ್ರೋಧದಿಂದ ಮೋಹ ಉಂಟಾಗುತ್ತದೆ. ಮೋಹದಿಂದ ನೆನಪು ತಪ್ಪುತ್ತದೆ. ನೆನಪು ತಪ್ಪಿದರೆ ಬುದ್ಧಿಹಾಳಾಗುತ್ತದೆ. ಬುದ್ಧಿ ಕೆಟ್ಟರೆ ತಾನೇ ಕೆಡುತ್ತಾನೆ.

ರಾಗ—ದುರ್ಗಾ ತ್ರಿತಾಳ

ಕ್ರೋಧದಿಂದ ತಲೆದೋರ್ವುದು ಮೋಹ । ನೆನಹು ಕೆಡಿಸುವುದು ಅಂಥ ವ್ಯಾಮೋಹ ॥ ಪ ॥ ಮರೆವಿನಂ ಕೆಡುವುದು ಅರಿವು ಬಳಿಕಲಾ । ಅರಿವು ಕೆಟ್ಟಮೇಲೆ ವ್ಯಕ್ತಿ ತಾ ಕೆಡುವಾ । ಮರೆವು ಕೆಡುಕು ವ್ಯಾಮೋಹಕೆ

ಕ್ರೋಧವೇ । ಮೂಲವು ತ್ಯಜಿಪುದು ಕ್ರೋಧವು ಮೊದಲು ॥ ೧ ॥ ಸಿಟ್ಟಿಗೆ ದಿಟ್ಟಿ ಇಲ್ಲವೆಂದರಿತು । ಸಿಟ್ಟನು ಹೋಗಲಾಡಿಪುದು ಮೊದಲು । ಅಟ್ಟಿ ಕ್ರೋಧವನು ಸುಟ್ಟು ಕಾಮವನು । ದಿಟ್ಟತನದಿ ಎಂದ ದಾಸಕೇಶವನುತ ॥೨॥

**ರಾಗ ದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದ ಮಧಿಗಚ್ಛತಿ ॥ ೬೪ ॥**

ರಾಗದ್ವೇಷಗಳಿಲ್ಲದೆ ತನ್ನ ಹಿಡಿತದಲ್ಲಿರುವ ಇಂದ್ರಿಯದಿಂದ ವಿಷಯಗಳನ್ನು ಉಪಭೋಗಿಸುತ್ತಾ ಮನಸ್ಸನ್ನು ಹೇಳಿದಂತೆ ನಡೆಯುವಹಾಗೆ ಮಾಡಿಕೊಂಡಿರುವಾತನು ಪ್ರಸನ್ನತೆಯನ್ನು ಹೊಂದುವನು.

ರಾಗ—ಸಾತಂಗ **ರೂಪಕತಾಳ**

ರಾಗದ್ವೇಷರಹಿತ ಮನದಿ **ಶಾಂತಿಸುಖಗಳ್** ನೆಲೆಸುವವು । **ಭೋಗ** ದಿಂದ ಇಂದ್ರಿಯಗಳ ವಿಮುಖವಾಗಿಸಲೆತ್ನಿಸುವುದು ॥ ಪ ॥ ಶಮದಿ ಮನವ ತಡೆ ಹಿಡಿಯುತೆ । ದಮದಿ ಇಂದ್ರಿಯಗಳ ಗೆದ್ದು ॥ ಸಮತೆಯನ್ನು ಪಡೆದ ಯೋಗಿ । ಪ್ರಸನ್ನತೆಯ ಹೊಂದುವ ದಿಟ ॥ ೧ ॥ ಹೇಳಿದಂತೆ ಕೇಳುವ ಮನ। ಆಳಿನಂತೆ ನಡೆವ ಇಂದ್ರಿಯ ಬಾಳಿನಲ್ಲಿ ಸಿದ್ಧಿಸಿಪಗೆ । ಹೇಳಲೇನದವನ ಶಾಂತಿ ॥ ೨ ॥ ರಾಗ ದ್ವೇಷ ರಹಿತ-ಮನವು । ಬೇಗ ಪಡೆದು ಪಾರ್ಥ ನೀನು ಯೋಗಿಯಾಗಿ ಭೋಗನೀಗು । ಎಂದ ದಾಸಕೇಶವನುತ ॥ ೩ ॥

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ॥**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

ಪ್ರಸನ್ನತೆಯುಂಟಾಗಲು ಆವನಿಗೆ ದುಃಖಗಳೆಲ್ಲವೂ ನಾಶವಾಗುವುವು. ಏಕೆಂದರೆ ಚಿತ್ತವು ಪ್ರಸನ್ನವಾದವನಿಗೆ ಬುದ್ಧಿಯು ಬೇಗನೆ ನಿಲುಗಡೆಗೆ ಬರುವುದು.

ರಾಗ—ಭೀಮ್‌ಪಲಾಸ್ ತ್ರಿತಾಳ

ಶಾಂತಿ ಪ್ರಸನ್ನತೆಯೆ । ಮುಖ್ಯ । ಅಪ್ರಸನ್ನನಿಗೆ ಯೋಗ ಲಭಿಸದದು। ಪ್ರಸನ್ನ ಚಿತ್ತ ಬುದ್ಧಿಯು ಬೇಗನೆ । ಯೊಗ್ಯನೆಕೆಗೆ ತಾ ಬಂದು ನಿಂದಿಹುದು ॥ ೧ ॥ ಚಿತ್ತವೃತ್ತಿಯನು ತಡೆಹಿಡಿಯುತೆ ಬಲು । ಉತ್ತಮ ಧ್ಯೇಯವ ಇದಿರೊಳಗಿಟು । ಸತ್ತು ಜನಿಪ ಈ ಕೋಟಲೆ ತಪ್ಪಿಸೆ। ಸತ್ವಲೇಸೆಂದ ದಾಸಕೇಶವನುತ ॥ ೨ ॥

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ನ ಶಾಂತಿರಶಾಂತಸ್ಯ ಕುತಃ ಸುಖಮ್ ॥ ೬೬ ॥**

ಯೋಗವಿಲ್ಲದವನಿಗೆ ನಿಲುಗಡೆ ನಿಂತ ಬುದ್ಧಿಯಿರುವದಿಲ್ಲ. ಯೋಗವಿಲ್ಲದವನಿಗೆ ಆತ್ಮಭಾವನೆಯೂ ಇರುವುದಿಲ್ಲ ಭಾವನೆಯನ್ನು ಮಾಡದವನಿಗೆ ಶಾಂತಿ ಇರುವುದಿಲ್ಲ. ಶಾಂತಿ ಇಲ್ಲದವನಿಗೆ ಸುಖವೆಲ್ಲಿಬಂತು?

ರಾಗ—ಪಟ್‌ದೀಪ್ ತ್ರಿತಾಳ

ಯೋಗರಹಿತನಿಗೆ ಸ್ಥಿರ ಬುದ್ಧಿ ಇಲ್ಲ । ಆತಗೆ ಆತ್ಮ ಭಾವನೆಯು ಇಲ್ಲ. ॥ ಪ ॥ ಆತ್ಮಭಾವನೆಯಿಂ ಶಾಂತಿ ಲಭಿಸುವುದು । ಆತ್ಮಭಾವರಹಿತಗೆ ಸುಖವೆಂತು ॥ ಆತ್ಮಾನಾತ್ಮ ವಿಚಾರಗೈದು ಪರ । ಮಾತ್ಮನ ಕಂಡಗೆ ಶಾಂತಿ ಸುಖಗಳು ॥ ೧ ॥ ಯೋಗವಿಲ್ಲದಗೆ ಆತ್ಮಭಾವವೆಲ್ಲಿ । ಭಾವವಿಲ್ಲದಗೆ ಶಾಂತಿಯದೆಲ್ಲಿ । ಶಾಂತಿಇಲ್ಲದಗೆ ಚಿರಸುಖವೆಲ್ಲಿ ಯೋಗಿಯಾಗೆಂದ ದಾಸಕೇಶವನುತ ॥ ೨ ॥

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭॥**

ಹರಿದಾಡುತ್ತಿರುವ ಇಂದ್ರಿಯಗಳ ಹಿಂದೆ ಮನಸ್ಸನ್ನು ಸಡಿಲು ಬಿಟ್ಟರೆ ಸುಂಟರಗಾಳಿಯು ನೀರಿನ ಮೇಲಣ ದೋಣಿಯನ್ನು ಹಾರಿಸಿಕೊಂಡು ಹೋಗುವಂತೆ ಅವನ ಪ್ರಜ್ಞೆಯನ್ನು ಹಾರಿಸಿಕೊಂಡು ಹೋಗುವುದು.

ರಾಗ—ಭೀಮ್‌ಪಲಾಸ್ ತ್ರಿತಾಳ

ಇಂದ್ರಿಯಗಳ ವಶವಾಗದಿರಲಿ ಮನ । ಇಂದ್ರಿಯಗಳು ಅಧಃಪಥನ ಕೊಯ್ಯುವು ॥ ಪ ॥ ವಾಯುವು ನೀರಿನ ಮೇಲಣ ದೋಣಿಯ । ಒಯ್ಯುವಂತೆ ಇಂದ್ರಿಯವಶ ಜೀವನ । ಪ್ರಜ್ಞೆಯ ಹಾರಿಸಿಬಿಡುವ ವಿಂದ್ರಿಯ ಗಳ್ । ನಿಗ್ರಹಿಸಿಂದ್ರಿಯಗಳಿಂದನು ಹರಿ ॥ ೧ ॥ ದೋಷ ಪೂರ್ಣ ಇಂದ್ರಿಯಗಳ ವಶದಲಿ । ಘಾಸಿಯಾಗ್ವುದು ಮನಕೆಂಬುದನ್ನರಿತು । ನಾಶ ರಹಿತ ಪರತತ್ತ್ವ ಚಿಂತನೆಯಿಂ । ಈಸು ಭವವನೆಂದ ದಾಸಕೇಶವನುತ॥ ೨ ॥

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥**

ಆದ್ದರಿಂದ ಎಲೈ ಮಹಾಬಾಹುವೇ, ಯಾವನ ಇಂದ್ರಿಯಗಳು ಯಾವ ವಿಷಯಗಳ ಕಡೆಗೂ ಹೋಗದಂತೆ ಬಿಗಿಹಿಡಿಯಲ್ಪಟ್ಟಿರುವುವೋ, ಆತನ ಪ್ರಜ್ಞೆಯೆ ನೆಲೆಗೆನಿಂತಿರುವುದು.

ರಾಗ—ಧಾಣಿ ತ್ರಿತಾಳ

ಇಂದ್ರಿಯ ನಿಗ್ರಹ ಗೈದನ್ಯಾರ್ । ಅವನೇ ಸುಖಿಜಗದೊಳು ಧನ್ಯಾತ್ಮ ॥ ಪ ॥ ಆಜ್ಞೆಯಂತೆ ನಡೆವಿಂದ್ರಿಯವುಳ್ಳವ । ಪ್ರಾಜ್ಞನವನೆ ಜಗದೊಳು ನಿಶ್ಚಯವು । ಪ್ರಜ್ಞೆ ಪ್ರತಿಷ್ಠಿತವಾಗಿಹುದವನಿಗೆ । ಸುಜ್ಞೆಯಿಂದ ಮನ ಇಂದ್ರಿಯವಾಳ್ವಗೆ ॥ ೧ ॥ ಬುದ್ಧಿ ಸವಾರನು ಮನ ಚಾಂಚಲ್ಯವ ಗೆದ್ದದ ಬಿಗಿಹಿಡಿದಿಹ ಕಡಿವಾಣ । ಸಿದ್ಧಿ ಪಡೆದಿಹನು ನಿರ್ನವವಂತೆಯೇ । ಸಿದ್ಧನಾಗೆಂದ ದಾಸಕೇಶವನುತ ॥ ೨ ॥

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋಮುನೇಃ ॥೬೯॥**

ಸಕಲ ಪ್ರಾಣಿಗಳಿಗೂ ಯಾವುದು ಇರುಳೋ ಆ ವೇಳೆಯಲ್ಲಿ ಸಂಯಮಿಯಾದವನು ಎಚ್ಚರದಿಂದಿರುತ್ತಾನೆ. ಉಳಿದ ಪ್ರಾಣಿಗಳು ಯಾವಾಗ ಎಚ್ಚರವಾಗಿರುವುವೋ, ತತ್ತ್ವವನ್ನರಿತ ಮುನಿಗೆ ಅದೇ ರಾತ್ರಿಯು

ರಾಗ—ಹಿಂ. ಕಾಪಿ ತ್ರಿತಾಳ

ಅಜ್ಞಾನಿಯ ಇರುಳೆ ಜ್ಞಾನಿಗೆ । ಅದುವೇ ಎಚ್ಚರದವಧಿ ॥ ಪ ॥ ಅಜ್ಞಾನಿಯ ಹಗಲೇ ಜ್ಞಾನಿಗೆ । ಅದುವೆ ರಾತ್ರಿಯಕಾಲ ॥ ಅಜ್ಞಾನಿಯ ರಾತ್ರಿಯ ಕಾಲವು ಅದು । ಜ್ಞಾನಿಯ ಜಾಗ್ರದವಸ್ಥೆ ॥ ೧ ॥ ತತ್ತ್ವವನ್ನರಿತು ಉತ್ತಮ ಪಥದೊಳು । ಸತ್ತ್ವಗುಣದಿ ಮೆರೆವನು ಜ್ಞಾನಿ । ಸತ್ಯ ಸ್ವರೂಪವ ತಿಳಿಯನೆತ್ತೊಳಲುವ । ನಿತ್ಯ ಸುಖಕ್ಕಾಗಿ ಅಜ್ಞಾನಿ ॥ ೨ ॥ ಪರಮಾರ್ಥ ಪಥವೇ ಜ್ಞಾನಿಯ ಎಚ್ಚರ । ಲೌಕಿಕವೇ ಜ್ಞಾನಿಯ ನಿದ್ದೆ ॥ ವ್ಯವಹಾರವೇ ಅಜ್ಞಾನಿಯ ಎಚ್ಚರ । ತತ್ತ್ವನಿದ್ದೆಯೆಂದ ದಾಸಕೇಶವನುತ ॥ ೩ ॥

**ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ । ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿ ಮಾಪ್ನೋತಿ ನ ಕಾಮಕಾಮೀ ॥ ೭೦ ॥**

ಎಲ್ಲಾ ಕಡೆಗಳಿಂದಲೂ ನೀರು ಬಂದು ತುಂಬುತ್ತಿದ್ದರೂ ಅಲುಗಾಡದೆ ಇರುವ ಕಡಲನ್ನು ಮೇರೆ ತಪ್ಪಿಸಲಾರದೆ ಹೇಗೆ ಹೊಳೆಗಳು ಆದರಲ್ಲಿಯೇ ಬಂದು ಸೇರಿಕೊಳ್ಳುವುವೊ, ಅವನೇ ಶಾಂತನು. ಭೋಗಗಳನ್ನು ಬಯಸುವವನು ಶಾಂತಿಯನ್ನು ಹೊಂದಲಾರನು.

ರಾಗ—ಜೀವನಪುರಿ ತ್ರಿತಾಳ

ತುಂಬಿದ ಕಡಲನು ನದಿಗಳೆಂತು ತಾವ್ । ಮೇರೆ ತಪ್ಪಿಸವೊ ಅಂತಯೇ ಬಯಕೆ ॥ ಪ ॥ ಮೇರೆ ತಪ್ಪಿಸದು ಜ್ಞಾನಿಯ ಜಗದೊಳು ॥ ಆರು

ವೈರಿಗಳು ಮೂರೀಷಣದೊಳ್ । ಸೇರಿ ಸುಖಿಪನನವರತನಾತ್ಮನೊಳ್ । ಮೀರಿ ದ್ವಂದ್ವಗಳ ಶಾಂತಿಯ ಪಡೆವನು ॥೧॥ ಭೋಗ ಬಯಸುವಗೆ ಶಾಂತಿಯದಿಲ್ಲವು । ಭೋಗಬಯಕೆಗಳ ಗೆದ್ದಗೆ ಶಾಂತಿ ॥ ಆಗುಹೋಗುಗಳ ಕರ್ತೃ ಶ್ರೀ ಹರಿಯೆಂದು । ನೀಗು ಭವವೆಂದ ದಾಸಕೇಶವನುತ ॥

**ವಿಹಾಯ ಕಾಮಾನ್ಯಃ ಸರ್ವಾನ್‌ಪುಮಾಂಶ್ಚರನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥**

ಯಾವನು ಎಲ್ಲಾ ಬಯಕೆಗಳನ್ನು ಬಿಟ್ಟು ಯಾವುದನ್ನೂ ಹಾರೈಸದೆ ನಾನು, ನನ್ನದೆಂಬುದಿಲ್ಲದೆ ನಡೆದುಕೊಳ್ಳುತ್ತಿರುವನೋ, ಅವನು ಶಾಂತಿಯನ್ನು ಹೊಂದುವನು.

ರಾಗ—ಹಿಂ. ಕಾಫಿ ತ್ರಿತಾಳ

ಬಯಕೆಗಳನ್ನು ಗೆದ್ದವನೆ ಸ್ಥಿತಪ್ರಜ್ಞ ॥ ಮಾಯಾ ಮಮತೆಯ ಗೆದ್ದವ ಜ್ಞಾನಿಯು ॥ ಪ ॥ ಹಾತೊರೆಯದೆ ಇಹವಸ್ತುಗಳಿಗೆ ಸದಾ । ಹಾತೊರೆಯುತೆ ಸತ್ಸಂಗಕೆ ಜಗದೊಳ್ । ಪ್ರೀತಿ ದ್ವೇಷ ಸುಖದುಃಖಗಳನು ಗೆದ್ದು । ಯಾತನೆಗಳ ಮೀರಿಹನೆ ಸ್ಥಿತಪ್ರಜ್ಞ ॥೧॥ ಆಶಿಸದಲೆ ತಾತ್ಕಾಲಿಕ ಸುಖಗಳ । ಆ ಶಿ ಸು ತ ಲೆ ನಿಜ ಮುಕ್ತಿ ಶಾಂತಿಯ ॥ ಲೇಸು ಕೆಡುಕುಗಳ ದ್ವಂದ್ವವ ಮೀರುತೆ ॥ ಈಸು ಭವವನೆಂದ ದಾಸಕೇಶವನುತ ॥೨॥

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣ ಮೃಚ್ಛತಿ ॥ ೭೨ ॥**

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗ ಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ ॥

ಪಾರ್ಥಾ, ಇದು ವೇ ಬ್ರಾಹ್ಮೀ ಸ್ಥಿತೀ, ಇದನ್ನು ಪಡೆದವನಿಗೆ ಮೋಹವುಂಟಾಗುವುದಿಲ್ಲ. ಅಂತ್ಯ ಕಾಲದಲ್ಲಿ ಈ ಸ್ಥಿತಿಯಲ್ಲಿದ್ದವನು ಬ್ರಹ ನಿರ್ವಾಣವನ್ನು ಪಡೆಯುವನು.

ರಾಗ—ಜೀವನಪುರಿ ತ್ರಿತಾಳ

ಅಹಂಮಮತೆಗಳ ಬಿಟ್ಟವನಡರುವ । ದಿವ್ಯ ಬ್ರಾಹ್ಮಿಸ್ಥಿತಿಗೆ ಪಾರ್ಥ ॥ ಪ ॥ ಯಾವುದ ಪಡೆದಗೆ ಭವವು ಪೀಡಿಸದೊ । ಯಾವುದ ಪಡೆದಗೆ ದ್ವಂದ್ವಬಾಧಿಸದೊ ॥ ಯಾವುದು ಬ್ರಹ್ಮಾನಂದ ಕರುಣಿಪುದೊ । ಅದುವೆ ಬ್ರಾಹ್ಮಿಸ್ಥಿತಿಯು ಪಾರ್ಥ ॥ ೧ ॥ ಯಾವುದರಿಂ ಮೋಹದ ವಿನಾಶವೋ ಯಾವುದರಿಂ ಶಾಂತಿಯು ಲಭಿಸುವುದೋ ॥ ಯಾವುದು ಬ್ರಹ್ಮನ ನಿಲುವ ತೋರುವುದೋ ॥ ಅದುವೆ ಬ್ರಾಹ್ಮಿಸ್ಥಿತಿಯು ಪಾರ್ಥ ॥ ೨ ॥ ಯಾವುದ್ದು ದ್ವಂದ್ವಾತೀತದ ಸ್ಥಿತಿಯೊ ॥ ಯಾವುದು ಸಕಲರ ಇಹಪರಗತಿಯೊ ॥ ಯಾವುದು ಜ್ಞಾನಿಗಳೆಲ್ಲರ ಮತಿಯೋ । ಅದುವೆ ಬ್ರಾಹ್ಮಿಸ್ಥಿತಿಯು ಪಾರ್ಥ ॥ ೩ ॥ ಯಾವುದು ತಾ ತೃಪ್ತಿಯ ಆಗರವೋ ಯಾವುದು ಆನಂದದ ಸಾಗರವೊ ॥ ಯಾವುದು ತಾ ಜ್ಞಾನಿಯ ಜಾಗರವೊ ॥ ಅದುವೆ ಬ್ರಾಹ್ಮಿಸ್ಥಿತಿಯು ಪಾರ್ಥ ॥ ೪ ॥ ಯಾವುದರಂತೆ ತಾ ನಿನ್ನೊಂದಿಲ್ಲವೊ । ಯಾವುದು ಎಲ್ಲೆಡೆ ತಾವ್ಯಾಪಕವೊ ॥ ಯಾವುದಕಿಂತಧಿಕವು ತಾನಿಲ್ಲವೊ । ಅದುವೆ ಬ್ರಾಹ್ಮಿಸ್ಥಿತಿಯು ಪಾರ್ಥ ॥ ೫ ॥ ಯಾವುದು ಪಡೆದರೆ ಬ್ರಹ್ಮ ನಿರ್ವಾಣವೊ । ಯಾವುದೂ ಪಡೆದರೆ ಶಾಂತಿ ಮುಕ್ತಿಯೊ ॥ ಆ ಬ್ರಾಹ್ಮಿಸ್ಥಿತಿ ಪಡೆದು ಸುಖಿಸೆಂದ ॥ ಆ ಪರಬ್ರಹ್ಮನು ದಾಸಕೇಶವನುತ ॥ ೬ ॥

## ॥ ಎರಡನೆಯ ಅಧ್ಯಾಯ ಸಂಪೂರ್ಣಂ ॥

